# ಶಹಾಪುರ ಪರಿಸರದ ಶಾಸನ ಮತ್ತು ದೇವಾಲಯಗಳ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ನಿಬಂಧ)


ಸಂಶೋಧಕ

ಸಿದ್ದಣ್ಣ ಎಸ್.ಕುಂಬಾರ





ರ್ಗದರ್ಶಕರು

ಡಾ.ಎಂ.ಕೊಟ್ರೇಶ್

ಎಂ.ಎ, ಎಂ.ಫಿಲ್, ಪಿಎಚ್.ಡಿ, ಡಿಪ್.ಇನ್.ಎಪಿಗ್ರಫಿ.

ಸಹಾಯಕ ಪ್ರಾಧ್ಯಾಪಕರು

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೯- ೨೦೧೦

# ಕಮಲಾಪುರ ಪರಿಸರದ ಶಾಸನ ಮತ್ತು ದೇವಾಲಯಗಳ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ನಿಬಂಧ)

ಸಂಶೋಧಕ

*ಸಿದ್ದಣ್ಣ ಎಸ್.ಕುಂಬಾರ*

ಮಾರ್ಗದರ್ಶಕರು

*ಡಾ.ಎಂ.ಕೊಟ್ರೇಶ್*

*ಎಂ.ಎ, ಎಂ.ಫಿಲ್, ಪಿಎಚ್.ಡಿ, ಡಿಪ್.ಇನ್.ಎಪಿಗ್ರಫಿ.*

*ಸಹಾಯಕ ಪ್ರಾಧ್ಯಾಪಕರು*

*ಶಾಸನಶಾಸ್ತ್ರ ವಿಭಾಗ*

*ಕನ್ನಡ ವಿಶ್ವವಿದ್ಯಾಲಯ, ಹಂಪಿ*



ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೯–೨೦೧೦

# ಸಂಶೋಧಕನ ಪ್ರಮಾಣಪತ್ರ

"ಶಹಾಪುರ ಪರಿಸರದ ಶಾಸನ ಮತ್ತು ದೇವಾಲಯಗಳ ಸಾಂಸ್ಕೃತಿಕ ಅಧ್ಯಯನ" ಎಂಬ ನಿಬಂಧವನ್ನು ಡಾ. ಎಂ.ಕೊಟ್ರೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜವಿಜ್ಞಾನ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸಿದ್ದಣ್ಣ ಎಸ್.ಕುಂಬಾರ
ಸಂಶೋಧಕ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 1/9/2010

# ಮಾರ್ಗದರ್ಶಕರ ಪ್ರಮಾಣಪತ್ರ

"ಶಹಾಪುರ ಪರಿಸರದ ಶಾಸನ ಮತ್ತು ದೇವಾಲಯಗಳ ಸಾಂಸ್ಕೃತಿಕ ಅಧ್ಯಯನ" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಶ್ರೀ ಸಿದ್ದಣ್ಣ ಎಸ್. ಕುಂಬಾರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಂ.ಕೊಟ್ರೇಶ್
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 1/9/2010

# ಪರಿವಿಡಿ

## ೧.೧ ಪ್ರಸ್ತಾವನೆ

ಶಾಸನಗಳು ಒಂದು ನಾಡಿನ ಚರಿತ್ರೆಯನ್ನು ಕಟ್ಟಿಕೊಡಬಲ್ಲ ಅಧಿಕೃತ ದಾಖಲೆಗಳಾಗಿವೆ. ಒಂದು ಪ್ರದೇಶದ ಇತಿಹಾಸವನ್ನು ತಿಳಿದುಕೊಳ್ಳಬೇಕಾದರೆ ಶಾಸನಗಳಿಂಗಿಂತ ಪ್ರಮುಖವಾದ ದಾಖಲೆಗಳು ಬೇರೆ ಯಾವುವೂ ಇಲ್ಲ. ಇತಿಹಾಸ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಅಂಶಗಳು ತಿಳಿಯಲು ಶಾಸನಗಳು ಪ್ರಮುಖ ದಾಖಲೆಗಳಾಗಿವೆ. ವಿದ್ವಾಂಸರು ***"ಶಾಸನಗಳು ಭಾರತ ಇತಿಹಾಸದ ಜೀವನಾಡಿ"*** ಎಂದು ವರ್ಣಿಸಿದ್ದಾರೆ. ದೇಶದ ಇತಿಹಾಸದ ರಚನೆಯಲ್ಲಿ ಶಾಸನಗಳು ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತವೆ.

ಒಂದು ಪ್ರದೇಶದ ಸಂಸ್ಕೃತಿಯನ್ನು ಅಧ್ಯಯನ ಮಾಡಬೇಕಾದರೆ ಶಾಸನಗಳು ವಿಶ್ವಾಸಾರ್ಹ ಆಕರಗಳಾಗಿ ನಿಲ್ಲುತ್ತವೆ. ಶಾಸನಗಳು ಆಡಳಿತ ವ್ಯವಸ್ಥೆಯನ್ನು, ಸಮಾಜದ ರೀತಿ–ನೀತಿಗಳನ್ನು, ಧರ್ಮದ ಕಟ್ಟುಪಾಡುಗಳನ್ನು, ಆರ್ಥಿಕ ಸ್ಥಿತಿಗಳನ್ನು, ಶಿಕ್ಷಣ, ಯುದ್ಧ ನೀತಿಗಳನ್ನು, ದಾನಗಳನ್ನು ಹೀಗೆ ಇನ್ನೂ ಮುಂತಾದ ಅಂಶಗಳನ್ನು ಒಳಗೊಂಡು ರಚನೆಯಾಗಿರುತ್ತವೆ. ಇವುಗಳ ಸಹಾಯದಿಂದ ನಾವು ಸಂಸ್ಕೃತಿಯನ್ನು ಪುನಃ ನಿರ್ಮಿಸಬಹುದಾಗಿದೆ

ಬಿ.ಎಲ್.ರೈಸ್ ಅವರ ಅಪಾರ ಸೇವೆಯ ಫಲವಾಗಿ ಈ ಕ್ಷೇತ್ರವು ಇಷ್ಟೊಂದು ಬೆಳವಣಿಗೆ ಹೊಂದಲು ಸಾಧ್ಯವಾಯಿತು ಎಂದು ಹೇಳಬಹುದು. ಇದರಿಂದಲೇ ಇವರಿಗೆ **"ಶಾಸನಗಳ ಪಿತಾಮಹ"** ಎಂದು ಕರೆಯುವುದು.

ಮೊಟ್ಟ ಮೊದಲು ಕರ್ನಾಟಕದಲ್ಲಿ ಶಾಸನಗಳ ಬಗ್ಗೆ ಅಧ್ಯಯನವನ್ನು ಪ್ರಾರಂಭಿಸಿದವರಲ್ಲಿ '**ಕರ್ನಲ್ ಮೆಕೆಂಜಿ**'ಯವರು ಮೊದಲಿಗರು. ನಂತರ '**ಬಿ.ಎಲ್.ರೈಸ್**' ಅವರು ಸುಮಾರು ೯೦೦೦ ಶಾಸನಗಳನ್ನು ಕರ್ನಾಟಕದಲ್ಲಿ ಪತ್ತೆ ಹಚ್ಚಿದ್ದಾರೆ. ಆದ್ದರಿಂದಲೆ ಕರ್ನಾಟಕವು ಶಾಸನಗಳ ಪಟ್ಟಿಯಲ್ಲಿ ದ್ವಿತೀಯ ಸ್ಥಾನವನ್ನು ಪಡೆದುಕೊಂಡಿದೆ. ರೈಸ್

ಅವರು ಹಳ್ಳಿಯಿಂದ ಜಿಲ್ಲೆಯವರೆಗೂ ಶಾಸನಗಳ ಶೋಧನೆ ನಡೆಸಿದ ಇವರು ವ್ಯವಸ್ಥಿತವಾಗಿ ಶಾಸನಗಳನ್ನು ಜೋಡಿಸಿ 'epigraphia karnatika' ಎಂಬ ಶೀರ್ಷಿಕೆಯ ೧೨ ಸಂಪುಟಗಳನ್ನು ಪ್ರಕಟಿಸಿದರು. ಇಲ್ಲಿ ಅವರು ಶಾಸನಗಳನ್ನು ಹೋಬಳಿ, ತಾಲೂಕು, ಜಿಲ್ಲಾವಾರು ಶಾಸನಗಳನ್ನಾಗಿ ವಿಂಗಡಿಸಿದ್ದಾರೆ.

ಹೈದರಾಬಾದ್ ಕರ್ನಾಟಕ ಭಾಗದ ಶಾಸನಗಳ ಸಂಗ್ರಹ ಕಾರ್ಯದಲ್ಲಿ ಮೊದಲಿಗೆ ತೊಡಗಿದವರೆಂದರೆ 'ಕರ್ನಲ್ ಮೆಕೆಂಜಿ', 'ಸರ್ ವಾಲ್ಟರ್ ಇಲಿಯಟ್' ಇವರು ಶಾಸನಗಳ ಸಂಗ್ರಹವನ್ನು ಪ್ರಾರಂಭಿಸಿದರು. ಕರ್ನಾಟಕದಲ್ಲಿ ಶಾಸನಗಳ ಸಂಶೋಧನೆ ಪ್ರಾರಂಭವಾದರೂ ಉತ್ತರ ಕರ್ನಾಟಕದ ಭಾಗಕ್ಕೆ ಈ ಭಾಗ್ಯ ಬೇಗನೆ ಒಲಿಯಲಿಲ್ಲ. ಉತ್ತರ ಕರ್ನಾಟಕದಲ್ಲಿ ಶಾನಸಗಳ ಅಧ್ಯಯನ ಪ್ರಾರಂಭವಾದರೂ ಗುಲಬರ್ಗಾ ಜಿಲ್ಲೆಯಲ್ಲಿ ಅಭ್ಯಸಿಸಿದ ಮತ್ತು ಪ್ರಕಟವಾದ ಶಾಸನಗಳ ಸಂಖ್ಯೆ ತೀರಾ ವಿರಳ.

ಮೆಕೆಂಜಿ ಸಂಗ್ರಹಿಸಿದ ೪೩೬ ಶಾಸನಗಳಲ್ಲಿ ಗುಲಬರ್ಗಾ ಜಿಲ್ಲೆಯ ೩೬ ಶಾಸನಗಳು ಮಾತ್ರ ಸಂಗ್ರಹಗೊಂಡಿದ್ದವು. ವಾಲ್ಟರ್ ಇಲಿಯಟ್‌ರು 'karnataka desh inscriptions' ಸಂಪುಟದಲ್ಲಿ ೫೯೫ ಶಾಸನಗಳಿದ್ದು ಅದರಲ್ಲಿ ಪ್ರಮುಖವಾಗಿ 'ಸಿರವಾಳ'ದ ಶಾಸನುವನ್ನು ಕಾಣಬಹುದು. ನಿಜಾಂ ಪ್ರಾಂತ್ಯದ ಕೆಲವು ಶಾಸನಗಳನ್ನು ಇವರು ಗುರುತಿಸಿದ್ದಾರೆ.

ದೇಶೀಯ ಶಾಸನ ಕ್ಷೇತ್ರಕ್ಕೆ ಡಾ.ಪಿ.ಬಿ.ದೇಸಾಯಿ ಅವರ ಸೇವೆ ಅಮೋಘವಾದದ್ದು. ಇವರು 'desai historical collections' ಎಂಬ ಪುಸ್ತಕದಲ್ಲಿ ಗುಲಬರ್ಗಾ ಜಿಲ್ಲೆಯ ೭೪ ಶಾಸನಗಳನ್ನು ಗುರುತಿಸಿದ್ದಾರೆ. ಹಾಗೆಯೇ 'ಹನುಮಾಕ್ಷಿ ಗೋಗಿ' ಅವರು **'ಕಲಬುರ್ಗಿ ಜಿಲ್ಲೆಯ ಶಾಸನ'** ಎಂಬ ಪುಸ್ತಕದಲ್ಲಿ ೨೪೭ ಶಾಸನಗಳನ್ನು ಉಲ್ಲೆಖಿಸಿದ್ದಾರೆ. ಈ ಪುಸ್ತಕದಲ್ಲಿ ಶಹಾಪುರಕ್ಕೆ ಸಂಬಂಧಿಸಿದ ೪೨ ಶಾಸನಗಳನ್ನು ಪ್ರಕಟಿಸಿದ್ದಾರೆ. ಡಾ.ವಿ.ಶಿವಾನಂದ **'ಹೈದರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು'** ಎಂಬ ಪುಸ್ತಕದಲ್ಲಿ ತಾಲೂಕಿನ ೭ ಶಾಸನಗಳನ್ನು ಪ್ರಕಟಿಸಿದ್ದಾರೆ. ಹಾಗೆಯೇ ಡಾ.ರಂಗರಾಜ ವನದುರ್ಗ ಅವರು ರಚಿಸಿದ **'ಶಹಾಪುರ ತಾಲೂಕಿನ ಶಾಸನಗಳು : ಒಂದು ಸಮೀಕ್ಷೆ'** ಕೃತಿಯು ಸ್ಥಳೀಯವಾಗಿ ಶಾಸನಗಳ ಬಗ್ಗೆ ಮಾಹಿತಿ ತಿಳಿಯಲು ಸಹಾಯಕವಾಗಿದೆ. ಡಿ.ಎನ್.ಅಕ್ಕಿ ಅವರ **'ಸಗರ ನಾಡ ಸಿರಿ'** ಎಂಬ ಕೃತಿಯಲ್ಲಿ ತಾಲೂಕಿನ ಹಲವಾರು ಶಾಸನಗಳನ್ನು ವಿವರಿಸಿದ್ದಾರೆ, ಲೇಖನದ ಅಂಕಣಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಸೂಗಯ್ಯ ಹಿರೇಮಠರ **'ಶಹಾಪುರ ದರ್ಶನ'** ಎಂಬ ಕೃತಿಯಲ್ಲಿ ಶಹಾಪುರ ತಾಲೂಕಿನ ವಿವರಣೆಯೊಂದಿಗೆ ಹಲವಾರು ಲೇಖಕರಿಂದ ಲೇಖನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ.

'ಎಮ್.ಯಾಸಿನ್ ಖುದ್ದೂಸಿ' ಮತ್ತು 'ಸೀತಾರಾಮ ಜಾಗೀರದಾರ' ಅವರು ಸಂಪಾದಿಸಿದ '**ಪರ್ಶಿಯನ್ ಅರೇಬಿಕ್ ಮತ್ತು ಉರ್ದು ಶಾಸನಗಳು**' ಶಹಾಪುರ, ಗೋಗಿ, ಸಗರ, ದೋರನಹಳ್ಳಿ ಗ್ರಾಮಗಳಲ್ಲಿ ದೊರೆತ ಶಾಸನಗಳ ಆಧಾರವಾಗಿ ಶಹಾಪುರ ಪ್ರದೇಶವು ಮಹಮ್ಮದೀಯರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಹೇಳಬಹುದು.

ಕನ್ನಡ ವಿಶ್ವವಿದ್ಯಾಲಯವು '**ಕಲಬುರ್ಗಿ ಜಿಲ್ಲೆಯ ಸಮಗ್ರ ಶಾಸನ ಸಂಪುಟ**' ವನ್ನು ಹೊರತರಲು ಪ್ರಯತ್ನಿಸುತ್ತಿದ್ದು ಇದು ಶ್ಲಾಘನಿಯ ವಿಷಯವಾಗಿದೆ.

ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಆದಿಲ್‌ಶಾಹಿಗಳ ವಾಸ್ತುಶಿಲ್ಪದ ಸಹಾಯದಿಂದ ಶಹಾಪುರ ತಾಲೂಕಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ವಿಷಯಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ. ಮೈಸೂರು ಪ್ರಾಚ್ಯವಸ್ತು ಸಂಗ್ರಹಾಲಯದ ಸಹಾಯದಿಂದ ಚನ್ನಬಸಪ್ಪ ಎಸ್.ಪಾಟೀಲ್ ಮತ್ತು ಬಾಲಸುಬ್ರಮಣ್ಯ ಅವರ ಮುಂದಾಳತ್ವದಲ್ಲಿ ಸಿರವಾಳ ಪರಿಸರದ ವಾಸ್ತುಶಿಲ್ಪದ ಬಗ್ಗೆ ಸಮಗ್ರವಾದ ಅಧ್ಯಯನ ಕೈಗೊಂಡು '**ಸಿರಿವಾಳ**' ಎಂಬ ಶೀರ್ಷಿಕೆಯಲ್ಲಿ ಪುಸ್ತಕವನ್ನು ಪ್ರಕಟಿಸಿದ್ದಾರೆ.

## ೧.೨ ಶಹಾಪುರ ಪರಿಸರದ ಭೌಗೋಳಿಕ ಹಿನ್ನೆಲೆ

**ಗಡಿಗಳು** : ೧೯೫೬ರ ಭಾಷಾವಾರು ಪ್ರಾಂತ್ಯ ರಚನೆಯಾದಾಗ ಅವಿಭಜಿತ ಕಲಬುರ್ಗಿ ಜಿಲ್ಲೆಯ ಭಾಗವಾಗಿದ್ದ ಶಹಾಪುರ ಇಂದು ನೂತನ ಯಾದಗಿರಿ ಜಿಲ್ಲೆಯ ಪ್ರಮುಖ ತಾಲೂಕು ಆಡಳಿತ ಕೇಂದ್ರವಾಗಿದೆ. ಉತ್ತರದಲ್ಲಿ ಜೇವರಗಿ ಮತ್ತು ಚಿತ್ತಾಪುರ ತಾಲೂಕುಗಳು, ಪೂರ್ವದಲ್ಲಿ ಯಾದಗಿರಿ ಜಿಲ್ಲೆ, ದಕ್ಷಿಣದಲ್ಲಿ ರಾಯಚೂರು ಜಿಲ್ಲೆಯ ದೇವದುರ್ಗ, ಪಶ್ಚಿಮಕ್ಕೆ ಸುರಪುರ ತಾಲೂಕು, ಆಗ್ನೇಯದಲ್ಲಿ ಆಂಧ್ರ ಪ್ರದೇಶ ಸುತ್ತುವರಿದಿವೆ.[೧] ಶಹಾಪುರ ತಾಲೂಕು ಕೇಂದ್ರವು ಯಾದಗಿರಿಯ ಉಪವಿಭಾಗದ ಆಡಳಿತದ ವ್ಯಾಪ್ತಿಗೆ ಒಳಪಟ್ಟಿದೆ. ಗುಲಬರ್ಗಾದಿಂದ ದಕ್ಷಿಣಕ್ಕೆ ೭೮ ಕಿ.ಮೀ. ನೂತನ ಯಾದಗಿರಿ ಜಿಲ್ಲೆಯಿಂದ ಪಶ್ಚಿಮಕ್ಕೆ ೩೪ ಕಿ.ಮೀ. ಅಂತರದಲ್ಲಿ ಈ ತಾಲೂಕು ಇದೆ. ಇಲ್ಲಿ ಮೇಲ್ದರ್ಜೆಯ ರಸ್ತೆಗಳು, ಉತ್ತಮವಾದ ಸಾರಿಗೆ ವ್ಯವಸ್ಥೆಯನ್ನು, ಹಾಗೆಯೇ ತಾಲೂಕಿನಲ್ಲಿ ಉತ್ತಮ ಆಡಳಿತ ವ್ಯವಸ್ಥೆಯನ್ನು ಕಾಣಬಹುದಾಗಿದೆ.

**ಹಿನ್ನೆಲೆ**

ಒಂದು ಪ್ರದೇಶದ ಭೌಗೋಳಿಕ ಪರಿಸರದ ಅಧ್ಯಯನ ಆ ಭಾಗದ ವಾಸ್ತವ ಸ್ಥಿತಿಯನ್ನು ತಿಳಿಯುವ ಪ್ರಮುಖ ಆಕರವಾಗಿರುತ್ತದೆ. ಆ ಪ್ರದೇಶದ ಹಿನ್ನಡೆ ಮತ್ತು ಮುನ್ನಡೆಗೆ ಭೌಗೋಳಿಕ ಪರಿಸರವೇ ಪ್ರಧಾನವಾಗಿದೆ.

**ಪ್ರಾಗೈತೀಹಾಸಿಕ**

ಶಹಾಪುರ ತಾಲೂಕಿನ **ಹಾರಣಗೆರೆ** ಗ್ರಾಮದ ಸಮೀಪದ **ಹಾಳುಹಳ್ಳಿ** ಗ್ರಾಮಕ್ಕೆ ಸೇರಿದ ಹೊಲದಳ್ಳದಲ್ಲಿ ಶಾತವಾಹನರ ಕಾಲದ **ಸೀಸದ ನಾಣ್ಯಗಳು** ದೊರೆತಿವೆ. ಇದರಲ್ಲಿ ಕೆಲವು ನಾಣ್ಯಗಳು ಶ್ರೀ ಶಿವಪ್ಪ ಸಾಲಿಯವರ ಕೈಸೇರಿದ್ದವು, ಅವುಗಳನ್ನು **ಶ್ರೀ ಡಿ.ಎಸ್.ಅಕ್ಕಿ** ಪರಿಶೀಲಿಸಿ ಹೆಚ್ಚಿನ ಮಾಹಿತಿಗಾಗಿ ಶಾಸನ ತಜ್ಞರಾದ **ಶ್ರೀ ಸಿತಾರಾಮ ಜಾಹಾಗಿದಾರ ಮತ್ತು ಶ್ರೀ ಎಂ.ಜಿ. ಮಂಜುನಾಥ** ಅವರ ಅಭಿಪ್ರಾಯ ಕೇಳಲಾಗಿತ್ತು. ನಾಣ್ಯಗಳ ಮೇಲಿದ್ದ ಬರಹಗಳನ್ನು  ಮತ್ತು ಇತರ ಮಾಹಿತಿಗಳನ್ನು ಅಭ್ಯಸಿಸಿದ ಜಹಾಗೀರ್‌ದಾರ್ ಹಾಗೂ ಮಂಜುನಾಥ ರವರು ಇವುಗಳು ಶಾತವಾಹನರ ನಾಣ್ಯಗಳು ಎಂದು ದೃಢೀಕರಿಸಿದ್ದಾರೆ. ಇವುಗಳು ಪ್ರಾಗೈತೀಹಾಸದ ಕುರುಹುಗಳಾಗಿವೆ.

ಶಹಾಪುರ ತಾಲೂಕಿನ **ವಿಭೂತಿಹಳ್ಳಿ** ಗ್ರಾಮದಲ್ಲಿ **'ಕಾಲ ನಿರ್ಣಯದ'** (ಕುರುಹುಗಳು) ಕಲ್ಲುಗಳ ಸಾಲುಗಳು ಕಂಡುಬರುತ್ತವೆ. ಸಮಯ, ದಿನ, ಋತುಗಳ ಬಗ್ಗೆ ತಿಳಿದುಕೊಳ್ಳಲು ಇಂದು ಹಲವಾರು ವಿಧಾನಗಳಿವೆ. ಹಿಂದಿನ ಕಾಲದ ಜನರಿಗೆ ಇಂತಹ ಸೌಲಭ್ಯ ಇರಲಿಲ್ಲ. ಮೊದಲು ಜನರು ಕಾಲ ನಿರ್ಣಯಕ್ಕಾಗಿ ತಮ್ಮದೇ ಆದ ವಿಧಾನಗಳನ್ನು ರೂಡಿಸಿಕೊಂಡಿದ್ದರು.  ಮಾನವನು ಒಂದೆಡೆ ನೆಲೆ ನಿಂತು ಬೇಸಾಯ ಮಾಡಲು ಆರಂಭಿಸಿದಾಗ ಅವರಿಗೆ ಮಳೆಗಾಲ, ಚಳಿಗಾಲ, ಬೇಸಿಗೆ ಕಾಲಗಳ ಬಗ್ಗೆ ತಿಳುವಳಿಕೆ ಇರಲಿಲ್ಲ. ಆಗ ಕಲ್ಲುಗಳಿಂದ ಕಾಲಗಳನ್ನು ಗುರುತಿಸಲು ಪ್ರಾರಂಭಿಸಿದನು.

೧೨ ಎಕರೆ ವಿಸ್ತಾರವಾದ ಹೊಲದಲ್ಲಿ ೩೫೦ಕ್ಕೂ ಹೆಚ್ಚು ಕಲ್ಲುಗಳಿವೆ. ಈ ಪ್ರದೇಶವನ್ನು **೧೯೮೫ ರಲ್ಲಿ ಅರಣ್ಯ ಇಲಾಖೆ** ಸ್ವಾಧಿನ ಪಡೆದುಕೊಂಡು ಅಲ್ಲಿ ಮರಗಳನ್ನು ಬೆಳೆಸುತ್ತಿದ್ದಾರೆ. ಸುತ್ತಲೂ ಬೇಲಿ ಹಾಕಿ ರಕ್ಷಿಸಿದ್ದಾರೆ.

೧೨ ಎಕರೆ ಜಾಗದಲ್ಲಿ ಒಂದು ಕಲ್ಲು ಮಧ್ಯದಲ್ಲಿದೆ. ಅದರ ದಕ್ಷಿಣ ದಿಕ್ಕಿನ ಕೊನೆಯ ಕಲ್ಲಿನ ಮೇಲೆ ಸೂರ್ಯನ ಕಿರಣಗಳು ನೇರವಾಗಿ ಬಿದ್ದರೆ ಅದನ್ನು ಮಳೆಗಾಲವೆಂದು ತಿಳಿದು ಬೇಸಾಯ ಚಟುವಟಿಕೆ ಪ್ರಾರಂಭಿಸುತ್ತಿದ್ದರು, ಹೀಗೆ ಚಳಿಗಾಲ, ಬೇಸಿಗೆ ಕಾಲವನ್ನು ಗುರುತಿಸುತ್ತಿದ್ದರು ಎಂದು ಬೆಂಗಳೂರು ಭಾರತಿಯ ಪುರಾತತ್ವ ಇಲಾಖೆಯ ಸಂಶೋಧನಾ ಸಹಾಯಕರಾದ ಡಾ. ಪ್ರಿಯಾ ಠಾಕೂರ್ ಅವರು ಸಂಶೋಧನಾ ವರದಿಯಲ್ಲಿ ತಿಳಿಸಿದ್ದಾರೆ.

೨೦೦೮ರಲ್ಲಿ ಈ ಸ್ಥಳವನ್ನು *ಭಾರತಿಯ ಪುರಾತತ್ವ ಇಲಾಖೆ ಸ್ವಾಧಿನ*ಪಡಿಸಿಕೊಂಡು ಸುತ್ತಲೂ ಬೇಲಿ ಹಾಕಿ ಪ್ರದೇಶವನ್ನು ರಕ್ಷಿಸತೊಡಗಿದೆ. ಸದ್ಯ ಈ ಪ್ರದೇಶವನ್ನು **ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃಧಿ ಮಂಡಳಿ** ಇದನ್ನು ಪ್ರವಾಸಿ ತಾಣವೆಂದು ಘೋಷಿಸಿದೆ.

ಐತಿಹಾಸಿಕವಾಗಿ ಸಗರ ಚಕ್ರವರ್ತಿಯು ಈ ನಾಡನ್ನು ಆಳ್ವಿಕೆ ಮಾಡಿದ ಹಿನ್ನೆಲೆ ಇರುವುದರಿಂದ ಈ ಭಾಗಕ್ಕೆ "ಸಗರನಾಡು" ಎಂದು ಕರಯುತ್ತಾರೆ. ಪುರಾಣಗಳಲ್ಲಿ 'ಸಗರ', 'ಸಾಗರಪುರ', 'ಸಗರಪುರ' ಎಂಬ ಪ್ರಖ್ಯಾತಿಯನ್ನು ಪಡೆದುಕೊಂಡಿದೆ.

"ನೆಲವೆಲ್ಲಂ ಕನಕಮಯಂ

ಜಗವೆಲ್ಲಂಸೊದೆ ಮಹೀಜಗಳ್ ಮಂಕುಜಗಳ್

ಶಿಲೆಗಳ್ ಪಳಿಯೇ ಪಳುಕಂ

ಗಳಮಿಂದ್ರಪುರ ಮಿಳಿಗಿಳಿದುದೊ ಸಗರ ನಾಡೊಳ್"[೨] ಎಂದು ಕವಿ ಲಕ್ಷ್ಮಿಶನಿಂದ ವರ್ಣಿಸಿಕೊಂಡಿದೆ.

ಅನೇಕ ವಿದ್ವಾಂಸರು ಶಹಾಪುರದ ಬೆಟ್ಟವನ್ನು ಹಿಮಾಲಯಕ್ಕೆ ಹೋಲಿಸಿರುವುದನ್ನು ಇಲ್ಲಿ ಕಾಣಬಹುದು. ಹಿಮಾಲಯದಲ್ಲಿ 'ಕೈಲಾಸ ಪರ್ವತ'ವಿದ್ದರೆ, ಈ ಬೆಟ್ಟದಲ್ಲಿ 'ಮೇಲುಗಿರಿ ಪರ್ವತವಿದೆ', ಅಲ್ಲಿ 'ಮಾನಸ ಸರೋವರ' ಇದರೆ, ಇಲ್ಲಿ 'ತಾವರಕೆರೆ' ಅಲ್ಲದೆ 'ಮಂದಾಕಿನಿ ತೀರ್ಥ' ಇವೆ. ಸಿದ್ಧಲಿಂಗೇಶ್ವರ, ಶೀಲವಂತೇಶ್ವರ, ಚರಬಸವೇಶ್ವರ, ದೇವಸ್ಥಾನಗಳು ಡಿಗ್ಗಿ ಸಂಗಮೇಶ್ವರ ಮತ್ತು ಸಂತ ಚಂದಾ ಹುಸೈನಿ ಗುಡಿ ಮತ್ತು ಮಸೀದೆಗಳು ಹಿಂದೂ-ಮುಸ್ಲಿಮರ ಭಾವೈಕ್ಯತೆಯ ಪ್ರತೀಕಗಳಾಗಿವೆ.[೩]

ಶಹಾಪುರ ನಗರದ ದಕ್ಷಿಣ ದಿಕ್ಕಿನಲ್ಲಿರುವ ಬೆಟ್ಟದ ಮೇಲಿನ ಕೋಟೆ(ಕೀಲ್ಲಾ) ಯನ್ನು ಮೊದಲು ಸಗರ ಚಕ್ರವರ್ತಿ ನಿರ್ಮಿಸಿದ್ದು ಎಂದು ತಿಳಿದುಬರುತ್ತದೆ. ತದನಂತರ ಅದು ಆದಿಲ್ ಶಾಹಿ ಆಳ್ವಿಕೆಗೆ ಒಳಪಟ್ಟು, ಮುಂದೆ ವಿಜಯನಗರದ ಅರಸರ ಅಧೀನಕ್ಕೆ ಬಂದಿತು. ನಂತರದ ದನಗಳಲ್ಲಿ ಸುರಪುರ ಸಂಸ್ಥಾನದ ನಾಯಕರ ಆಳ್ವಿಕೆಗೆ ಒಳಪಟ್ಟು, ಕೊನೆಯಲ್ಲಿ ಮೊಘಲ್ ದೊರೆ **"ಔರಂಗಜೇಬನ"** ಕ್ರೌರ್ಯಕ್ಕೆ ಬಲಿಯಾಯಿತು. ಈ ವಿಷಯವು **'ಯದುನಾಥ ಸರ್ಕಾರ'** ಅವರ ಸಂಶೋಧನೆಯಿಂದ ತಿಳಿದುಬರುತ್ತದೆ.[೪] ಈ ಶಿಥಿಲಗೊಂಡ ಕೋಟೆಯನ್ನು ವಿಜಾಪುರದ ಆದಿಲ್‌ಶಾಹಿಗಳು ಪುನರ್ ನಿರ್ಮಿಸಿದರು. ಇದಕ್ಕೆ ನಿದರ್ಶನವೆಂಬಂತೆ ಕೋಟೆಯ ಮುಂದೆ ಮಸೀದಿಯನ್ನು ನಿರ್ಮಿಸಿದ್ದಾರೆ. ಅದಲ್ಲದೆ ಪುನ್ನರ್ ನಿರ್ಮಿಸಿದ ಕಮಾನು(ಪ್ರವೇಶ ದ್ವಾರ)ಗಳ ಮೇಲೆ ಕುರಾನಿನ ಕೆಲ ಶ್ಲೋಕಗಳನ್ನು ಮತ್ತು ಕೋಟೆಯ ದುರಸ್ತಿ ಕಾರ್ಯದ ಮಾಹಿತಿಯನ್ನು ಕೆತ್ತಿಸಿರುತ್ತಾರೆ. ಇದು ಆದಿಲ್ ಶಾಹಿಗಳ ಆಳ್ವಿಕೆಯ ಪ್ರತ್ಯಕ್ಷ ಸಾಕ್ಷಿಗಳಾಗಿವೆ.

ಮೊಘಲರ ಕ್ರೌರ್ಯಕ್ಕೆ ಬಲಿಯಾದ ಕೋಟೆಯು ಶಿಥಿಲಾವಸ್ಥೆಯನ್ನು ತಲುಪಿತ್ತು. ಇಂದಿಗೂ ಅದು ಹಾಗೆಯೇ ಉಳಿದಿದೆ. ಸದ್ಯ ಈ ಕೋಟೆಯು ನಿಧಿಗಳ್ಳರ ಅಡ್ಡೆಯಾಗಿ

ಮಾರ್ಪಟ್ಟಿದೆ. ಕೋಟೆಯ ಪ್ರತಿಯೊಂದು ಸ್ಥಳಗಳು, ಪ್ರವೇಶ ದ್ವಾರಗಳು, ಮೇಲ್‌ಚಾವಣಿಗಳನ್ನು ನಿಧಿಯಾಸೆಗಾಗಿ ತೋಡಿ ಹಾಳು ಮಾಡಿದ್ದಾರೆ. ಅಂದು ಕೋಟೆಯು ಮೊಘಲರ ಕ್ರೌರ್ಯಕ್ಕೆ ತುತ್ತಾದರೆ, ಇಂದು ನಿಧಿಗಳ್ಳರ ಆಸೆಗೆ ತುತ್ತಾಗಿದೆ.

ಪ್ರಸಿದ್ಧ ಕಲ್ಯಾಣ ಚಾಲುಕ್ಯರ ದೊರೆ **"ಆರನೇ ವಿಕ್ರಮಾದಿತ್ಯನನ್ನು"** ತನ್ನ ತಂದೆಯ ಮರಣದ ನಂತರ ಶಹಾಪುರ ತಾಲೂಕಿನ **"ನಡಿಹಾಳ"**ಗ್ರಾಮದಲ್ಲಿ ಚಕ್ರವರ್ತಿ ಪಟ್ಟವನ್ನು ಕಟ್ಟಿಸಿಕೊಂಡನು[೫] ಎಂದು ತಿಳಿದುಬರುತ್ತದೆ. ಇದರಿಂದಾಗಿ ಶಹಾಪುರವು ಹಲವು ರಾಜಮನೆತನಗಳ ಆಳ್ವಿಕೆಗೆ (ಇಲ್ಲಿ ದೊರೆತ ಶಾಸನಗಳು ದೇವಾಲಯಗಳು ಮತ್ತು ಮಸೀದಿಗಳು) ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ.

ಕೆಲವು ವರ್ಷಗಳ ಹಿಂದೆ (೧೯೮೮) ಹೊಲವೊಂದರಲ್ಲಿ ದೊರೆತ ನಾಲ್ಕು ಅಡಿ ಎತ್ತರವಿರುವ, ೧೮ ಕೈಗಳುಳ್ಳ **'ಚಾಮುಂಡಿ'** ವಿಗ್ರಹ (೮ನೇ ಶತಮಾನ) ದೊರೆತಿರುವುದರಿಂದ ಇಲ್ಲಿ **ಶಾಕ್ತಪಂಥವು** ಪ್ರಚಲಿತದಲ್ಲಿತ್ತು ಎಂದು ತಿಳಿದುಬರುತ್ತದೆ.

ಈ ಪ್ರದೇಶವು ಆದಿಲ್ ಶಾಹಿ ಅರಸರ ಸರದಾರರಾದ **'ಬಹಾವುದ್ದಿನ್'** **ಮತ್ತು** **'ಖವಾಸಖಾನ್'** ಎಂಬುವವರ ಆಡಳಿತದಲ್ಲಿತ್ತು. ಅಂತೆಯೇ ಇಂದಿಗೂ ಈ ಪಟ್ಟಣದ ಒಂದು ಬಡಾವಣೆಗೆ 'ಆದಿಲ್‌ಪುರ' ಎಂದು, ಇನ್ನೊಂದು ಬಡಾವಣೆಗೆ 'ಖವಾಸಪುರ' ಎಂದು ಕರೆಯುತ್ತಾರೆ.

ಸಿದ್ಧಲಿಂಗೇಶ್ವರ, ಶೀಲವಂತೇಶ್ವರ, ಚರಬಸವೇಶ್ವರ, ಸಂಗಮೇಶ್ವರ, ಬಲಭೀಮೇಶ್ವರ, ಸಗರದ ಎಲ್ಲಮ್ಮ, ಸೋಫಿ ಶರ್ಮದ್, ಚಂದಾ ಸಾಹೇಬ, ಶರಭಲಿಂಗೇಶ್ವರ ಪ್ರಸಿದ್ಧ ದೇವಾಲಯಗಳಾಗಿವೆ. ಮೇಲುಗಿರಿ ಪರ್ವತ, ಪಾಂಡವರ ಬಂಡೆ, ನೀಲಮ್ಮನ ಬಾವಿ, ಬಸವನಕೊಳ್ಳ, ನಿಲಂಹಕಾರ, ಗೊಗ್ಗಮಾಂಬೆ, ಅಮರಕಲ್ಯಾಣ, ಅಕ್ಕ-ತಂಗಿಯರ ಬಾವಿ, ಬೆಟ್ಟದ ಮೇಲೆ ಮಲಗಿರುವ ಬುದ್ಧ ಇವು ಶಹಾಪುರದ ಬೆಟ್ಟದಲ್ಲಿರುವ ಪ್ರೇಕ್ಷಣಿಯ ಸ್ಥಳಗಳಾಗಿವೆ.

**ವಿಸ್ತೀರ್ಣ** : ಈ ತಾಲೂಕು ೧,೫೯,೪೯೨ ಹೆಕ್ಟೇರ್ ವಿಸ್ತೀರ್ಣವನ್ನು (೧೬೯೪ ಚ.ಕಿ.ಮೀ.)[೬] ಹೊಂದಿದು, ೫ ಹೋಬಳಿಗಳಿದ್ದು (ಶಹಾಪುರ, ಗೊಗಿ, ದೋರನಹಳ್ಳಿ, ಕಿರಿಹಯ್ಯಾಳ, ವಡಗೇರಿ) ಒಟ್ಟು ೧೫೫ ಗ್ರಾಮಗಳಿವೆ. ವಡಗೇರಿ ಗ್ರಾಮದಲ್ಲಿ 'ಉಪ ತಹಸೀಲ್ದಾರ್' ಕಾರ್ಯಾಲಯ ಪ್ರಾರಂಭಗೊಂಡಿದ್ದು ತಾಲೂಕು ಕೇಂದ್ರದ ಎಲ್ಲ ಸೌಲಭ್ಯಗಳನ್ನು ಹೊಂದಿದೆ.

**ಜನಸಂಖ್ಯೆ** : ೧೯೯೦ರ ಜನಗಣತಿ ಪ್ರಕಾರ ಈ ತಾಲೂಕಿನಲ್ಲಿ ೩,೩೬,೭೫೫ ಜನಸಂಖ್ಯೆಯನ್ನು ಹೊಂದಿದ್ದು, ೨,೯೩,೧೩೩ ಜನ ಗ್ರಾಮೀಣ ಪ್ರದೇಶದಲ್ಲಿ, ೪೩,೬೨೨ ಜನ ಪಟ್ಟಣದಲ್ಲಿ ವಾಸವಾಗಿದ್ದಾರೆ.[೭]

**ನದಿಗಳು** : ಕನ್ನಡ ನಾಡಿನ ಜೀವನದಿ 'ಕಾವೇರಿ'ಯಾದರೇ ಸಗರನಾಡಿನ ಜೀವನದಿ **ಕೃಷ್ಣಭೀಮೆ**ಯರಾಗಿದ್ದಾರೆ ಎಂದು ಹೇಳಬಹುದು. ತಾಲೂಕಿನಲ್ಲಿ ಈ ಎರಡು ನದಿಗಳು ಹಾದು ಹೋಗಿದ್ದು, ತಾಲೂಕಿನಲ್ಲಿ ನೀರಾವರಿ ವ್ಯವಸ್ಥೆಗೆ ತುಂಬಾ ಅನುಕೂಲವಾಗಿದೆ. ದಕ್ಷಿಣಾಭಿಮುಖವಾಗಿ ಹರಿಯುವ ಕೃಷ್ಣಾ ನದಿಯು, ಉತ್ತರದಿಂದ ಪೂರ್ವಕ್ಕೆ ಹರಿಯುವ ಭೀಮಾ ನದಿಯು ಗಡಿರೇಖೆಯಂತೆ ಕಾಣುತ್ತವೆ. ವಿಶೇಷವೆಂದರೆ ಈ ಎರಡು ನದಿಗಳು ತಾಲೂಕಿನ ಸುತ್ತಲೂ ಗಡಿರೇಖೆಗಳಂತಿದ್ದು ಸಂಪೂರ್ಣವಾಗಿ ತಾಲೂಕನ್ನು ಸುತ್ತುವರಿದಿದೆ. ನದಿಗಳು ಕೊನೆಗೆ '**ಸಂಗಮ**' ಎಂಬ ಗ್ರಾಮದಲ್ಲಿ ಸೇರಿಕೊಂಡು ಸಂಗಮತಾಣವನ್ನು ಸೃಷ್ಟಿಸಿರುವುದು ಕಂಡುಬರುತ್ತದೆ.

**ಬೆಳೆಗಳು** : ಗುಲಬರ್ಗಾ ಜಿಲ್ಲೆಯು ತೊಗರಿಯ ಕಣಜವೆಂದೇ ಪ್ರಖ್ಯಾತಿ ಪಡೆದಿದೆ. ಈ ತಾಲೂಕಿನಲ್ಲಿಯೂ ತೊಗರಿ ಮತ್ತು ಜೋಳ ಅತಿ ಮುಖ್ಯ ಬೆಳೆಗಳಾದರೆ, ಸಜ್ಜೆ, ಗೋದಿ, ಕಡಲೆ, ಸೇಂಗಾ, ಕುಸುಬಿ ಇತರೆ ದ್ವಿಧಳ ಧಾನ್ಯಗಳು ಪ್ರಮುಖ ಬೆಳೆಗಳಾಗಿವೆ. ಇತ್ತೀಚೆಗೆ ಆಂಧ್ರ ಪ್ರದೇಶದ ರೈತರ ಪ್ರಭಾವದಿಂದಾಗಿ ತಾಲೂಕಿನಲ್ಲಿ ಮೆಣಸಿನಕಾಯಿ, ಹತ್ತಿ, ನಿಷೇದಿತ ಬೆಳೆ ಭತ್ತ, ಪ್ರಮುಖ ಆರ್ಥಿಕ ಬೆಳೆಗಳಾಗಿ ಬೆಳೆಯುತ್ತಿದ್ದಾರೆ. ತಾಲೂಕಿನ ಗಡಿ ಪ್ರದೇಶವಾದ ಜೇವರಗಿ ತಾಲೂಕಿನ '**ನಾಗರಹಳ್ಳಿ**' ಎಂಬ ಗ್ರಾಮದಲ್ಲಿ ಸಕ್ಕರೆ ಕಾರ್ಖಾನೆಯು ಪ್ರಾರಂಭವಾಗಿರುವುದರ ಪ್ರಭಾವದಿಂದ ಕಬ್ಬಿನ ಬೆಳೆಗೆ ಬೇಡಿಕೆ ಇರುವುದನ್ನು ಅರಿತ ರೈತರು ಕಬ್ಬನ್ನು ಬೆಳೆಯಲು ಪ್ರಾರಂಭಿಸಿದ್ದಾರೆ. ವ್ಯವಸಾಯದ ಜೊತೆ ಜೊತೆಯಲ್ಲಿ ಮೀನುಗಾರಿಕೆ, ಪಶುಪಾಲನೆ, ಕೋಳಿಸಾಕಾಣಿಕೆ, ಗುಡಿಕೈಗಾರಿಕೆಗಳು, ಚರ್ಮೋದ್ಯೋಗವಿದ್ದು ಪಾದರಕ್ಷೆಗಳ ತಯಾರಿಕೆಯೂ ಇದೆ, ಕೈಮಗ್ಗ ಸೀರೆಗಳಿಗೆ ಈ ತಾಲೂಕು ಪ್ರಸಿದ್ಧವಾಗಿದೆ.

ಈ ತಾಲೂಕು ಸುತ್ತಮುತ್ತಲ ಗ್ರಾಮಗಳಿಗೆ ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿದೆ. ಇಲ್ಲಿ ನಿಯಂತ್ರಿತ ಮಾರುಕಟ್ಟೆ ಇದೆ. ಇಲ್ಲಿ ಬೀದರ್-ಶ್ರೀರಂಗಪಟ್ಟಣ ರಾಜ್ಯ ಹೆದ್ದಾರಿ ಹಾದು ಹೋಗಿದ್ದು ದೂರದ ಊರುಗಳಿಗೆ ಪ್ರಯಾಣಿಸಲು ಅನುಕೂಲವಾಗಿದೆ. ಪಟ್ಟಣದಿಂದ ೩೪ ಕಿ.ಮೀ. ದೂರದ ಯಾದಗಿರಿಯಲ್ಲಿ ರೈಲ್ವೆ ವ್ಯವಸ್ಥೆ ಇದೆ.

'**ಆಲಮಟ್ಟಿ**' ಮತ್ತು '**ನಾರಾಯಣಪುರ**' ಅಣೆಕಟ್ಟೆಯ ವ್ಯವಸ್ಥೆಯಿಂದಾಗಿ ತಾಲೂಕಿಗೆ ಸಮೃದ್ಧವಾದ ನೀರಾವರಿ ವ್ಯವಸ್ಥೆಯನ್ನು ಕಾಣಬಹುದಾಗಿದೆ. ಈ ಪ್ರದೇಶವು **ಕಪ್ಪು** (ಎರೆ) ಮಣ್ಣನ್ನು ಹೊಂದಿರುವುದರಿಂದ ಈ ಮಣ್ಣು ನೀರಾವರಿಗೆ ಯೋಗ್ಯ ಭೂಮಿಯಾಗಿದೆ. **ಜೊತೆಗೆ ಇಲ್ಲಿ ಮರಳು ಮಿಶ್ರಿತ ಕೆಂಪು (ಮಸುಬು)** ಮಣ್ಣನ್ನು ಕಾಣಬಹುದು. ಅಲ್ಲದೆ ಬಹಳಷ್ಟು ಭೂಭಾಗ ಸಮತಟ್ಟಾದ ಪ್ರದೇಶವನ್ನು ಹೊಂದಿರುವುದರ ಜೊತೆಗೆ ಇಲ್ಲಿ

ಅಲ್ಪಮಟ್ಟಿಗೆ ಗುಡ್ಡಗಾಡು ಹೊಂದಿದೆ. ಈ ಗುಡ್ಡಗಾಡು ಪ್ರದೇಶ ಒಟ್ಟು ೪,೯೯೫ ಹೆಕ್ಟೇರ್ ವಿಸ್ತೀರ್ಣ ಹೊಂದಿದ್ದು ಇದಕ್ಕೆ '**ಮಮದಾಪುರ**' ಬೆಟ್ಟವೆಂದು ಕರೆಯುತ್ತಾರೆ.[೭]

ಇಲ್ಲಿ ಬೇಸಿಗೆಯಲ್ಲಿ ಸೆಕೆ ಹೆಚ್ಚಾಗಿರುತ್ತದೆ. ತಾಲೂಕಿನಲ್ಲಿ ಸಾಮಾನ್ಯವಾಗಿ ೩೫ ಡಿಗ್ರಿ ಸೆಲ್ಸಿಯಸ್ ಕನಿಷ್ಠ ಉಷ್ಣಾಂಶವನ್ನು, ಗರಿಷ್ಠ ೪೫ ಡಿಗ್ರಿ ಸೆಲ್ಸಿಯಸ್ ಉಷ್ಣಾಂಶವನ್ನು ಹೊಂದಿರುತ್ತದೆ. ಇಲ್ಲಿ ವಾರ್ಷಿಕವಾಗಿ ೭೩೦.೨೦ ಮಿ.ಮೀ ಮಳೆ ಬೀಳುತ್ತದೆ ಎಂದು ತಿಳಿಯಬಹುದಾಗಿದೆ.[೮]

**ಖನಿಜ ಸಂಪತ್ತು** : ಶಹಾಪುರ ಪ್ರದೇಶವು ಅತಿ ಹೆಚ್ಚಿನ ಖನಿಜ ಸಂಪತ್ತನ್ನು ಹೊಂದಿದ ನಾಡಾಗಿದೆ. '**ಗೋಗಿ**' ಗ್ರಾಮದಲ್ಲಿ "**ಯುರೇನಿಯಂ**" ಖನಿಜ ನಿಕ್ಷೇಪವನ್ನು ಕಂಡುಬರುತ್ತದೆ. ದೇಶದ ಮೂರನೇ ರಾಜ್ಯದ ಮೊದಲ ಯುರೇನಿಯಂ ಘಟಕ(ಪ್ರಾಯೋಗಿಕ) (ಜಾರ್ಖಂಡ್‌ನ '**ಜಾದುಗೂಡ**' ಮತ್ತು ಆಂಧ್ರ ಪ್ರದೇಶದ '**ಪುಲವೆಂಕುಲಾ**'ದಲ್ಲಿ)[೯] ವನ್ನು ಕಾಣಬಹುದಾಗಿದೆ.

**ಮರ್ಕಲ್ ಕೊಳ್ಳೂರಿನಲ್ಲಿ ವಜ್ರದ ನಿಕ್ಷೇಪವಿದೆ.** ಸರ್ಕಾರ ಆ ಪ್ರದೇಶವನ್ನು ಹಕ್ಕುಪಾಯ ಮಾಡಿಕೊಂಡು ಸಂಶೋಧನೆ ನಡೆಸಲು ಪ್ರಯತ್ನಿಸುತ್ತಿದ್ದು, ಇದರಿಂದಾಗಿ ಸುತ್ತಮುತ್ತಲ ಪ್ರದೇಶವನ್ನು ಸರ್ಕಾರ ಖರೀದಿಸಲು ಮುಂದಾಗಿದೆ. '**ಕೊಹಿನೂರ**' ವಜ್ರ ಶಹಾಪುರ ತಾಲೂಕಿನಲ್ಲಿ ದೊರೆತಿದೆ ಎಂಬುದಕ್ಕೆ ಸರಕಾರಿ ದಾಖಲೆಗಳಿವೆ. ಇದನ್ನು ಮೊದಲ ಬಾರಿಗೆ '**ರಾಬರ್ಟ್ ಸಿವೆಲ್**' ಅವರು ಹೇಳಿದ್ದಾರೆ. ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಯು ಈ ಸ್ಥಳವನ್ನು ಅಭಿವೃದ್ಧಿ ಪಡಿಸಲು ಯೋಜನೆಗಳನ್ನು ರೂಪಿಸಿದೆ.

ಗ್ರಾನೈಟ್ ಮತ್ತು ಸಿಮೆಂಟ್ ತಯಾರಿಕೆಯಲ್ಲಿ ಬೇಕಾಗುವಂತಹ '**ಸುಣ್ಣದಕಲ್ಲು**' ಈ ತಾಲೂಕಿನಲ್ಲಿ ನಾಗನಟಗಿ, ಕರ್ಕಿಹಳ್ಳಿ, ಧರಿಯಾಪುರ, ಹೊಸಕೇರಾ, ರಾಜಾಪುರ, ಚಂದಾಪುರದಲ್ಲಿ ಹೇರಳವಾಗಿ ದೊರೆಯುತ್ತದೆ. ಅಲ್ಲದೆ ಕಟ್ಟಡ ನಿರ್ಮಾಣಕ್ಕೆ ಬೇಕಾಗುವ '**ಚಪ್ಪಡಿಕಲ್ಲು**' '**ಹಾಸುಕಲ್ಲು**' ಸಿರವಾಳ, ಅಣಬಿ, ಹೊಸೂರ, ದೋರನಹಳ್ಳಿ[೧೦] ಮುಂತಾದ ಗ್ರಾಮಗಳಲ್ಲಿ ದೊರೆಯುತ್ತದೆ.

## ೧.೩ ವ್ಯಾಪ್ತಿ

ನಮ್ಮ ಸಂಸ್ಕೃತಿಯ ಪ್ರತೀಕಗಳಾಗಿರುವ ಶಾಸನಗಳು ಮತ್ತು ದೇವಾಲಯಗಳ ತಲಸ್ಪರ್ಶಿ ಅಧ್ಯಯನಕ್ಕಾಗಿ ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಅವುಗಳ ಅಧ್ಯಯನದ ವ್ಯಾಪ್ತಿಯನ್ನು ಕೂಡಿಸಿಕೊಳ್ಳಲಾಗಿದೆ. ಶಹಾಪುರ ತಾಲೂಕಿನಲ್ಲಿ ರಾಷ್ಟ್ರಕೂಟರಿಂದ ಹಿಡಿದು ನಿಜಾಂ ಅರಸರ ಕಾಲದವರೆಗೂ ಹಲವಾರು ಶಾಸನಗಳು ಮತ್ತು ದೇವಾಲಯಗಳ ವಾಸ್ತುಶಿಲ್ಪಗಳು ದೊರೆತಿವೆ.

ಈ ಸಂಶೋಧನಾ ಅಧ್ಯಯನದ ವಿಷಯದ ವ್ಯಾಪ್ತಿಯನ್ನು ಶಹಾಪುರ ಪರಿಸರದಲ್ಲಿ ಕಂಡುಬರುವ ಶಾಸನ, ದೇವಾಲಯಗಳ ಅಧ್ಯಯನಕ್ಕೆ ಮಾತ್ರ ಸೀಮಿತ ಮಾಡಿಕೊಳ್ಳಲಾಗಿದೆ. ಇದು ನಗರ ಪ್ರದೇಶವನ್ನು ಒಳಗೊಂಡು ಸಿರವಾಳ, ಅಣಬಿ, ಸಗರ, ರಸ್ತಾಪುರ, ವಿಭೂತಿಹಳ್ಳಿ, ಮದ್ರಿಕಿ, ಗೋಗಿ, ಭೀಮರಾಯನಗುಡಿ, ದೋರನಹಳ್ಳಿ, ಹಾರಣಗೆರಾ ಗ್ರಾಮಗಳ ವ್ಯಾಪ್ತಿಗೆ ಮಾತ್ರ ಒಳಪಟ್ಟಿರುತ್ತದೆ.

## ೧.೪ ವಿಧಿವಿಧಾನ

ಸಂಶೋಧನೆಯು ಹಲವಾರು ವಿಧಾನಗಳಲ್ಲಿ ನಡೆಯುವಂಥದ್ದು. ನಾನು ಕೈಗೊಂಡಿರುವ ಈ ಸಂಶೋಧನೆಯಲ್ಲಿ ಕ್ಷೇತ್ರಕಾರ್ಯವಿಧಾನ, ಮಾಹಿತಿ ಆಕರಗಳ ಸಂಗ್ರಹ ವಿಧಾನ, ಐತಿಹಾಸಿಕ ವಿಧಾನ, ತೌಲನಿಕ ವಿಧಾನ, ವಿಮರ್ಶಾತ್ಮಕ ವಿಧಾನ, ವಿವರಣಾತ್ಮಕ ವಿಧಾನಗಳನ್ನು ಅನುಸರಿಸಿದ್ದು ಗ್ರಂಥಗಳ ಮೂಲಕ ಮತ್ತು ವಿದ್ವಾಂಸರನ್ನು ಭೇಟಿ ಮಾಡುವ ಮೂಲಕ, ದಿನಪತ್ರಿಕೆಗಳಲ್ಲಿನ ಪ್ರಕಟವಾದ ಮಾಹಿತಿ ಕಲೆಹಾಕುವ ಮೂಲಕ ಈ ವಿಧಾನಗಳನ್ನು ಸಂಶೋಧನೆಯಲ್ಲಿ ಅಳವಡಿಸಿಕೊಂಡಿದ್ದೇನೆ. ಈ ಕ್ಷೇತ್ರದಲ್ಲಿ ದುಡಿದ ಮಹನಿಯರ ಭೇಟಿಯೊಂದಿಗೆ ಮತ್ತು ಅವರಿಂದ ಮಾಹಿತಿಯನ್ನು ಪಡೆಯುವ ಮೂಲದ್ದ ಈ ಸಂಶೋಧನೆಯನ್ನು ಮಾಡಿದ್ದೇನೆ.

**ಟಿಪ್ಪಣಿ**

೧. ಕರ್ನಾಟಕ ರಾಜ್ಯ ಪತ್ರ, ೧೯೯೩.

೨. ಸಗರ ಕೃಷ್ಣಾಚಾರ್ಯ, ಶಹಾಪುರ ದರ್ಶನ, ಪುಟ : ೧.

೩. ಅದೇ : ಪುಟ : ೩

೪. ಅದೇ : ಪುಟ : ೬

೫. ಅದೇ : ಪುಟ : ೫

೬. ಎಂ.ಬಿ.ಪಾಟೀಲ್, ಗು.ಜಿ.ಗ್ಯಾ, ಪುಟ : ೫

೭. ಕರ್ನಾಟಕ ರಾಜ್ಯ ಪತ್ರ, ೧೯೯೩.

೮. ಅದೇ,

೮,ಅ. ಅದೇ,

೯. ಪ್ರಜಾವಾಣಿ ದಿನ ಪತ್ರಿಕೆ, ೧೨ನೇ ಮೇ.

೧೦. ಚಂದ್ರಕಾಂತ ಕರದಳ್ಳಿ, ಶಹಾಪುರ ದರ್ಶನ, (ಭೌಗೋಳಿಕ ಪರಿಚಯ) ಪುಟ : ೧೬

ಶಹಾಪುರ ಪ್ರದೇಶದ ಐತಿಹಾಸಿಕ ಹಿನ್ನೆಲೆಯನ್ನು ತಿಳಿದುಕೊಳ್ಳಲು ಪ್ರಮುಖ ಆಧಾರವೇ ಶಾಸನಗಳಾಗಿವೆ.

ಇಲ್ಲಿಯ ಶಾಸನಗಳ ಆಧಾರದಿಂದ ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳನ್ನು ತಿಳಿಯಬಹುದಾಗಿದೆ. ಹಾಗೇ ದೇವಾಲಯಗಳು, ಜಿನಾಲಯಗಳು ಈ ಪರಿಸರದ ಧಾರ್ಮಿಕ ಐತಿಹ್ಯಗಳನ್ನು ತಿಳಿಸುತ್ತವೆ. ಇವೆಲ್ಲವುಗಳ ವಿವರಣೆಯನ್ನು ಈ ಅಧ್ಯಾಯನದಲ್ಲಿ ಪರಿಚಯಿಸುವ ಕಾರ್ಯವನ್ನು ಮಾಡಲಾಗಿದೆ.

## ೨.೧ ರಾಜಕೀಯ ವ್ಯವಸ್ಥೆ

ಸಾಮ್ರಾಜ್ಯ ಶಾಹಿ ವ್ಯವಸ್ಥೆಯಲ್ಲಿ ಜನತೆ ಸುಖ-ಶಾಂತಿ-ನೆಮ್ಮದಿಯಿಂದ ಜೀವನ ಸಾಗಿಸಲು ಅಲ್ಲಿನ ರಾಜಕೀಯ ವ್ಯವಸ್ಥೆಯೆ ಪ್ರಧಾನವಾಗಿರುತ್ತದೆ. ಅಂದು ಆಡಳಿತವನ್ನು 'ಅರ್ಥಶಾಸ್ತ್ರ' ಮತ್ತು 'ಮನುಸ್ಮತಿ'(ನೀತಿಸಾರ) ಗ್ರಂಥಗಳ ಆಧಾರವಾಗಿಟ್ಟುಕೊಂಡು ತಮ್ಮ ರಾಜ್ಯಭಾರವನ್ನು ನಡೆಸುತ್ತಿದ್ದರು. ಆಡಳಿತದ ಹಿತದೃಷ್ಟಿಯಿಂದ ಸಾಮ್ರಾಜ್ಯವನ್ನು ವಿವಿಧ ವಿಭಾಗಗಳಾಗಿ ವಿಂಗಡಿಸಿದ್ದರು. ಆಡಳಿತಕ್ಕೆ ಪ್ರಧಾನ ರಾಜ, ನಂತರ ಯುವರಾಜ, ಮಂತ್ರಿಮಂಡಲದ ಅಧಿಕಾರಿಗಳು ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತಿದ್ದರು.

ಶಹಾಪುರವು ಹಲವು ರಾಜಮನೆತನಗಳ ಅಧಿನಕ್ಕೆ ಒಳಪಟ್ಟಿತ್ತು. ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಳಚೂರ್ಯರು, ಯಾದವರು-ಶಿಲಾಹಾರರು, ಮುಸ್ಲಿಂ ಸುಲ್ತಾನರ ಆಳ್ವಿಕೆಯನ್ನು ಕಂಡಿದೆ.

ತಾಲೂಕಿನಲ್ಲಿ ಲಭ್ಯವಿರುವ ಶಾಸನಗಳ ಆಧಾರದಿಂದ ಆಳ್ವಿಕೆ ನಡೆಸಿದ ರಾಜಮನೆತನಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

### ಮೌರ್ಯರು

ತಾಲೂಕಿನ ಗಡಿ ಪ್ರದೇಶವಾದ ಸನ್ನತಿ ಗ್ರಾಮದಲ್ಲಿ ಇತ್ತೀಚೆಗೆ ನಡೆದ

ಉತ್ಖನನದ ಸಂದರ್ಭದಲ್ಲಿ ದೊರೆತ ಅಶೋಕನ ಶಾಸನಗಳಿಂದ ಈ ಪ್ರದೇಶವು ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ. ಮೌರ್ಯರ ಶಾಸನಗಳಿಂದ ಹಾಗೂ ತಾಲೂಕಿನ ಇಂಗಳಗಿ, ಅಣಬಿಯಲ್ಲಿ ದೊರೆತ ಇವರ ಲಿಪಿಯ ಆಧಾರದಿಂದ ಈ ಪ್ರದೇಶವು ಅವರ ಸಾರ್ವಭೌಮತ್ವಕ್ಕೆ ಒಳಗಾಗಿತ್ತು ಎನ್ನುವ ವಿಷಯ ಸ್ಪಷ್ಟವಾಗುತ್ತದೆ. ಇದರಿಂದ ಸ್ಥಳೀಯ ಇತಿಹಾಸವು ಕ್ರಿ.ಪೂ. ೩ನೇ ಶತಮಾನಕ್ಕೆ ಹೋಗುತ್ತದೆ.

**ಶಾತವಾಹನರು : ಕ್ರಿ.ಪೂ. ೨೩೦–ಕ್ರಿ.ಶ. ೨೨೫**

ಮೌರ್ಯರ ನಂತರ ಶಾತವಾಹನರು ಈ ಪ್ರದೇಶವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡರು. ಅಣಬಿ, ಹುರಸಗುಂಡಗಿ, ಇಂಗಳಗಿಯಲ್ಲಿ ಶಾತವಾಹನರ ಲಿಪಿರಹಿತ ಶಿಲಾಫಲಕಗಳು ದೊರೆತಿವೆ. ಅವರ ಕಾಲದ ಸೀಸದ ನಾಣ್ಯಗಳು ಹಾರಣಗೆರಾ ಗ್ರಾಮದಲ್ಲಿ ದೊರಕಿವೆ [೧೧] (ತಾಲೂಕಿನ ಹಾರಣಗೆರಾಗ್ರಾಮದ 'ಹಾಳುಹಳ್ಳಿ'ಯಲ್ಲಿ ದೊರೆತ ಸೀಸದ ನಾಣ್ಯಗಳ ಆಧಾರದ ಮೇಲೆ , ಇವುಗಳು ಶಾತವಾಹನತಿಗೆ ಸೇರಿದ್ದ ಕುರಿತು ಸ್ಥಳಿಯ ಇತಿಹಾಸಕಾರರಾದ ಡಿ.ಎನ.ಅಕ್ಕಿ ಹಾಗೂ ತಜ್ಞರಾದ ಸೀತಾರಾಮ ಜಹಾಗಿರ್‌ದಾರ್ ಮತ್ತು ಎಂ.ಜಿ.ಮಂಜುನಾಥ ದೃಢಪಡಿಸಿದ್ದಾರೆ). ಅಲ್ಲದೆ ತಾಲೂಕಿನ ಗಡಿಯಾಚೆ ಇವರ ಕಾಲದ ಶಾಸನಗಳು ಲಿಪಿರಹಿತ ಶಿಲಾಫಲಕಗಳು ಮತ್ತು ನಾಣ್ಯಗಳ ಆಧಾರದಿಂದ ಈ ಪ್ರದೇಶವು ಇವರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ.

**ರಾಷ್ಟ್ರಕೂಟರು : ಕ್ರಿ.ಶ. ೭೫೭–೯೭೩**

ರಾಷ್ಟ್ರಕೂಟರ ದೊರೆಯಾದ '**ಮದಗಜಮಲ್ಲ ಶ್ರೀ ಕನ್ನರದೇವ**'(**ಮೂರನೇ ಕೃಷ್ಣ**)ನ ಕುರಿತು **ಸಿರವಾಳ ಶಾಸನ** [೧೨] (ಕ್ರಿ.ಶ.೯೩೯) ಮಾಹಿತಿ ನೀಡುತ್ತದೆ. ಶಾಸನದಿಂದ ಈ ಪ್ರದೇಶವು ಅವರ ಆಳ್ವಿಕೆಗೆ ಒಳಪಟ್ಟಿದ್ದನ್ನು ತಿಳಿಸುತ್ತದೆ. ಅಣಬಿ ಗ್ರಾಮದಲ್ಲಿ ದೊರೆತಿರುವ ವಾಸ್ತುಶಿಲ್ಪದ ಸಹಾಯದಿಂದದೀ ಪ್ರದೇಶವು ರಾಷ್ಟ್ರಕೂಟರ ಆಡಳಿತದ ಅಧೀನದಲ್ಲಿತ್ತು ಎಂದು ತಿಳಿದುಬರುತ್ತದೆ. ಹಾರಣಗೆರೆ ಗ್ರಾಮದ ಹರಿಜನವಾಡದಲ್ಲಿ ಸ್ತಂಭ ಶಾಸನ ದೊರೆತಿದ್ದು ಅದರ ಎರಡು ಬದಿಗಳಲ್ಲಿ ಅಕ್ಷರಗಳನ್ನು ಕೊರೆಯಲಾಗಿದೆ. ಆದರೆ ಈ ಶಾಸನವು ಒಡೆದುಹೋಗಿದ್ದು, ಅದರ ಲಿಪಿಯು ಗುರುತಿಸದಷ್ಟು ತ್ರುಟಿತಗೊಂಡಿದೆ.ಅಳಿದುಳಿದ ಲಿಪಿಯಲ್ಲಿ ರಾಷ್ಟ್ರಕೂಟರ ದೊರೆ ಕನ್ನರದೇವನ ಹೆಸರಿನ ಉಲ್ಲೇಖವಿದ್ದು, ಶಾಸನ ಅಸ್ಪಷ್ಟವಾಗಿದೆ. ಕ್ರಿ.ಶ. ೧೦ನೇ ಶತಮಾನದ್ದು ಎಂದು ಊಹಿಸಬಹುದಾಗಿದೆ.

**ಕಲ್ಯಾಣ ಚಾಲುಕ್ಯರು : ಕ್ರಿ.ಶ. ೯೭೩–೧೧೮೯**

'**ಜಗದೇಕಮಲ್ಲ**' ಎಂಬ ಬಿರುದನ್ನು ಹೊಂದಿದ್ದ '**೨ನೇ ಜಯಸಿಂಹನು**'(೧೦೧೫–

೧೦೪೨) ಈ ನಾಡನ್ನು ಆಳಿದ ಕಲ್ಯಾಣ ಚಾಲುಕ್ಯರ ಪ್ರಥಮ ದೊರೆಯಾಗಿದ್ದಾನೆ. ಜಯಸಿಂಹನು "ಪೊಟ್ಟಳಕೆರೆ ನೆಲೆಮೀಡಿನೋಳು ರಾಜ್ಯಂಗೈಯುತ್ತಿದ್ದಾನೆಂದು" 'ಅಣಬಿ ಶಾಸನ'[೧೩]ದಿಂದ ತಿಳಿದುಬರುತ್ತದೆ. ಈತನಿಗಿಂತ ಪೂರ್ವದ ಯಾವುದೇ ಶಾಸನಗಳು ನಮಗೆ ಈ ತಾಲೂಕಿನಲ್ಲಿ ಲಭ್ಯವಿರುವುದಿಲ್ಲ.

ಚಾಲುಕ್ಯರ ದೊರೆ '**ಮಲ್ಲಿಕಾಮೋದ**' ಎಂಬ ಹಿರಿಮೆಯುಳ್ಳ **ಎರಡನೇ ಜಯಸಿಂಹ**ನು ಕ್ರಿ.ಶ. ೧೦೨೮ರಲ್ಲಿ ಹೊರಡಿಸಿದ ಮದ್ರಿಕಿಯ ಶಾಸನವು[೧೪] ಇವರ ರಾಜಧಾನಿ **ಏತಗಿರಿ(ಯಾದಗಿರಿ)**ಯಾಗಿತ್ತು ಎಂದು ತಿಳಿಸುತ್ತದೆ. 'ಭೀಮರಾಯನಗುಡಿ' ಶಾಸನದ ಪತ್ತೆಯಿಂದ ಜಯಸಿಂಹನ ನಂತರ **ಒಂದನೇ ಸೋಮೇಶ್ವರ**ನ್ನು (ಕ್ರಿ.ಶ. ೧೦೪೨–೧೦೬೮) ಅಧಿಕಾರಕ್ಕೆ ಬಂದನ್ನು ಎಂದು ತಿಳಿಯುತ್ತದೆ. ಇತನ್ನು 'ಅಹವಮಲ್ಲ' ಎಂಬ ಬಿರುದನ್ನು ಹೊಂದಿದ್ದನು. ಈ ಶಾಸನದಲ್ಲಿ ಹಸು ಮತ್ತು ಕರುವಿನ ಚಿತ್ರವನ್ನು ಕೆತ್ತಿದ್ದಾರೆ.

ನಂತರ ಕ್ರಿ.ಶ. ೧೦೫೮ರಲ್ಲಿ ಹೊರಡಿಸಿದ 'ಮದ್ರಿಕಿಯ' ಬಸವಣ್ಣನ ಗುಡಿಯ ಶಾಸನವು **೧ನೇ ಸೋಮೇಶ್ವರ**ನ ರಾಜಧಾನಿಯ ವಿವರಣೆಯನ್ನು ನೀಡುತ್ತದೆ. ಇವನ ಅವಧಿಯಲ್ಲಿ 'ಕಲ್ಯಾಣ'ವನ್ನು ರಾಜಧಾನಿಯನ್ನಾಗಿ ಘೋಷಿಸಿಕೊಂಡಿದ್ದನು. 'ಆಹವಮಲ್ಲ' ನಂತರ ಅಧಿಕಾರಕ್ಕೆ ಬಂದವನು **೨ನೇ ಸೋಮೇಶ್ವರ** (ಕ್ರಿ.ಶ. ೧೦೬೮–೭೬) ಕಂಪಿದೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನ್ನು ಎಂದು ತಿಳಿಸುತ್ತದೆ.

ತರುವಾಯ **ಆರನೇ ವಿಕ್ರಮಾದಿತ್ಯ**ನು ತನ್ನ ತಂದೆಯ ಮರಣಾನಂತರ ತಾಲೂಕಿನ '**ನಡಿಹಾಳ**' ಎಂಬ ಗ್ರಾಮದಲ್ಲಿ ಪಟ್ಟವನ್ನು ಕಟ್ಟಿಕೊಂಡನು. ಇದರಿಂದ ಈ ಪ್ರದೇಶವು ನೇರವಾಗಿ ಆರನೇ ವಿಕ್ರಮಾದಿತ್ಯನ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಹೇಳಬಹುದು. ಇದಕ್ಕೆ 'ದರಿಯಾಪುರ', 'ಮುಡಭೂಳ' ಶಾಸನಗಳು ಪ್ರತ್ಯಕ್ಷ ನಿದರ್ಶನಗಳಾಗಿವೆ. ಕಲ್ಯಾಣ ಚಾಲುಕ್ಯರ ಅಸ್ತಿತ್ವ ಈ ತಾಲೂಕಿನಲ್ಲಿ ಹೆಚ್ಚಾಗಿರುವುದನ್ನು ನೋಡಬಹುದಾಗಿದೆ.

**ಶಿಲಾಹಾರರು : ಕ್ರಿ.ಶ. ೧೧೮೯–೧೩೧೨**

ಕ್ರಿ.ಶ. ೧೧೦೮ರ ಸಿರವಾಳ ಶಾಸನವು ಶಿಲಾಹಾರರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ತಿಳಿಯಲು ಸಹಾಯವಾಗುತ್ತದೆ. ಶಿಲಾಹಾರ ವಂಶದ '**ಸಿಂಗಿದೇವ**'ಇಲ್ಲಿ ಆಡಳಿತದ ಚುಕ್ಕಾಣಿ ಹೊಂದಿದನು ಎಂದು ಹೇಳಬಹುದು.

**ಕಳಚೂರ್ಯರು : ಕ್ರಿ.ಶ. ೧೧೫೬–೧೧೮೩**

ತಾಲೂಕಿನ ಗುರಸೂಣಗಿ ಗ್ರಾಮದಲ್ಲಿ ದೊರೆತ ಶಾಸನಗಳಲ್ಲಿ 'ಸಗರನಾಡು ೩೦೦ ಮತ್ತು ೫೦೦ರ ವಿವರಣೆಯನ್ನು ಒಳಗೊಂಡಿದೆ. ಈ ಶಾಸನದ ಸಹಾಯದಿಂದ ಈ ಪ್ರದೇಶವು

ಕಳಚೂರ್ಯರ ಆಧಿಪತ್ಯಕ್ಕೆ ಒಳಗಾಗಿತ್ತು ಎಂದು ತಿಳಿದುಬರುತ್ತದೆ.

**ವಿಜಯನಗರ : ಕ್ರಿ.ಶ. ೧೩೩೬–೧೫೬೫**

ಶಹಾಪುರದ ವಿಶ್ವಕರ್ಮ ಮಠದಲ್ಲಿ ದೊರೆತಿರುವ ಕ್ರಿ.ಶ. ೧೫೨೧ರ '**ತಾಮ್ರ ಶಾಸನ**'ದಿಂದಾಗಿ ಈ ತಾಲೂಕು ವಿಜಯನಗರ ಆಳ್ವಿಕೆ ಒಳಗಾಗಿತ್ತು ಎಂದು ತಿಳಿಯಬಹುದಾಗಿದೆ. ಇದು ವಿಜಯನಗರ ಅರಸರು ಮಠಕ್ಕೆ ಕೊಟ್ಟ ದತ್ತಿಯಾಗಿರುತ್ತದೆ.

**ಬಹಮನಿ : ಕ್ರಿ.ಶ. ೧೩೪೭–೧೫೨೭**

ಈ ತಾಲೂಕಿನಲ್ಲಿ ದೊರೆತ ೨೧ ಶಾಸನಗಳಲ್ಲಿ ೧೦ ಶಾಸನಗಳು ಬಹಮನಿಯವರಿಗೆ ಸಂಬಂಧಿಸಿವೆ. ಬಹಮನಿ ಸುಲ್ತಾನನಾದ '**೨ನೇ ಮುಹಮದ ಷಾನು**' ಹೊರಡಿಸಿದ 'ಸಗರ'ದಲ್ಲಿನ ೨ ಪರ್ಶಿಯನ್ ಶಾಸನಗಳಿಂದ ಈ ಪ್ರದೇಶವು ಬಹಮನಿಯ ಅಧಿಕಾರಕ್ಕೆ ಒಳಗಾಗಿದ್ದ ವಿವರ ನೀಡುತ್ತವೆ. ಇದು ಈ ತಾಲೂಕಿನಲ್ಲಿ ದೊರೆತ ಅತ್ಯಂತ ಪ್ರಾಚೀನ ಪರ್ಶಿಯನ್ ಶಾಸನವಾಗಿದೆ. ಸಗರ ಕೋಟೆಯ ಪ್ರವೇಶ ದ್ವಾರದಲ್ಲಿ(ಬಡಾದರ್ವಾಜಾ)ರುವ '**ಫಿರೋಜ ಷಾ**'ನ ಆಳ್ವಿಕೆಯಲ್ಲಿ (ಕ್ರಿ.ಶ. ೧೪೦೭) ಕೊತ್ವಾಲನಾದ ಪಾಹಿ ಮಾಪನ್ ಸುಲ್ತಾನ ರಂಜಾನ್ ತಿಂಗಳಲ್ಲಿ ಇದನ್ನು ನಿರ್ಮಿಸಿದನು ಎಂದು ತಿಳಿದುಬರುತ್ತದೆ.

**ವಿಜಾಪುರ ಆದಿಲ್ ಶಾಹಿಗಳು : ಕ್ರಿ.ಶ. ೧೪೮೯–೧೬೮೬**

ಬಹಮನಿಯರ ನಂತರ ಆಡಳಿತದ ಚುಕ್ಕಾಣಿಯನ್ನು ಹಿಡಿದವರು ಬಿಜಾಪುರದ ಆದಿಲ್ ಶಾಹಿಗಳು. ಕ್ರಿ.ಶ. ೧೫೬೦–೬೧ರಲ್ಲಿ ರಚನೆಯಾದ ಪರ್ಶಿಯನ್ನು ಬಾಷೆಯ ೨ ಶಾಸನಗಳು ದೊರನಹಳ್ಳಿ ಗ್ರಾಮದಲ್ಲಿ ದೊರತಿವೆ. '**೧ನೇ ಅಲಿ ಆದಿಲ್ ಷಾ**'ನ ಆಳ್ವಿಕೆಯಲ್ಲಿ ಈ ಶಾಸನವನ್ನು ಮುದ್ರಿಸಿದ್ದರು ಎಂದು ಹೇಳಬಹುದು.

ನಗರ ಪ್ರದೇಶದಲ್ಲಿ ದೊರತ ೬ ಶಾಸನಗಳು ಶಹಾಪುರ ಕೋಟೆಗಳಲ್ಲಿ ಆದಿಲ್ ಶಾಹಿಗಳು ಆಡಳಿತ ವಹಿಸಿಕೊಂಡು ಆಳ್ವಿಕೆ ನಡೆಸಿದ್ದರು ಎನ್ನುವದನ್ನು ತಿಳಿಸುತ್ತದೆ.

## ೨.೨ ಸಾಮಾಜಿಕ ವ್ಯವಸ್ಥೆ

ಶಾಸನ ಮತ್ತು ದೇವಾಲಯಗಳಲ್ಲಿ ದಾಖಲಾಗಿರುವ ಮಾಹಿತಿಗಳ ಆಧಾರದ ಮೇಲೆ ಈ ಭಾಗದಲ್ಲಿದ ಜಾತಿ ವ್ಯವಸ್ಥೆ, ಸಂಪ್ರದಾಯ ನಂಬಿಕೆ, ಸ್ತ್ರೀಯ ಸ್ಥಾನಮಾನ, ಸತಿಪದ್ಧತಿ, ಜನಕಲ್ಯಾಣ ಕಾರ್ಯಗಳು, ಹಬ್ಬ ಹರಿದಿನಗಳ ಬಗ್ಗೆ ಇಲ್ಲಿ ವಿವರಿಸಲಾಗಿದೆ.

**ಜಾತಿ ಪದ್ಧತಿ**

ವೇದಗಳ ಕಾಲದಿಂದ ಅನುಸರಿಸಿಕೊಂಡು ಬರುತಿದ್ದ ಚತುರ್‌ವರ್ಣ ವ್ಯವಸ್ಥೆಯು

ಇಲ್ಲಿ ಮುಂದುವರಿದುಕೊಂಡು ಬಂದಿತು ಎಂದು ತಿಳಿಯುತ್ತದೆ. ಈ ಚತುರ್ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣರು ಮೇಲ್‌ಸ್ತರದಲ್ಲಿದ್ದರೆ ಶೂದ್ರರು ಸಮಾಜದ ಅತ್ಯಂತ ಕೆಳ ಸ್ತರದಲ್ಲಿದ್ದರು. ಬ್ರಾಹ್ಮಣರು ಸಂಸ್ಕೃತವನ್ನು ಬಲ್ಲವರಾಗಿರುವುದರಿಂದ ಇವರಿಗೆ ಗುರುವಿನ, ಪಂಡಿತನ ಸ್ಥಾನವನ್ನು ಹೊಂದಿದ್ದರು. ಅಗ್ರಹಾರ ಮತ್ತು ಬ್ರಹ್ಮಪುರಿಗಳು ಇವರಿಗಾಗಿಯೇ ಮಿಸಲಾದ ಸ್ಥಾನಗಳಾಗಿದ್ದವು. ಅವು ಕರದಿಂದ (ತೆರಿಗೆ) ವಿನಾಯತಿ ಪಡೆದುಕೊಂಡಿದ್ದವು.

ಕ್ಷತ್ರಿಯರು ಸಾಮಾಜಿಕ ಸ್ತರದಲ್ಲಿ ದ್ವಿತೀಯ ಸ್ಥಾನವನ್ನು ಹೊಂದಿದ್ದರು. ಇವರು ಆಡಳಿತವನ್ನು ಸಮರ್ಥವಾಗಿ ನಿಭಾಯಿಸುವ ಗುಣವನ್ನು ಪಡೆದವರಾಗಿದ್ದರು. ಮತ್ತು ರಾಜನೀತಿಯನ್ನು ಆಧಾರವಾಗಿಟ್ಟುಕೊಂಡು ರಾಜ್ಯಭಾರವನ್ನು ಮಾಡುತ್ತಿದ್ದರು. ಸಾಮ್ರಾಜ್ಯಕ್ಕೆ ಒದಗಿ ಬಂದಂತಹ ವಿಪತ್ತನ್ನು ಪರಿಹರಿಸಿ ಪ್ರಜೇಗಳಿಗೆ ನೆಮ್ಮದಿಯ ಜೀವನ ನೀಡಲು ಪ್ರಯತ್ನಿಸುತಿದ್ದರು. ಇವರು ಕೆಲವು ಸಂದರ್ಭದಲ್ಲಿ ಮೇಲ್ ಮತ್ತು ಕೇಳಸ್ತರದ ಯುವತಿಯರನ್ನು ರಾಣಿಯರನ್ನಾಗಿ ಮಾಡಿಕೊಳ್ಳುತ್ತಿದ್ದರು. ಇವರ ಆಳ್ವಿಕೆಯ ಸಂದರ್ಭದಲ್ಲಿ ಬ್ರಾಹ್ಮಣರಿಗೆ ಮತ್ತು ಎಲ್ಲಾ ಧರ್ಮದ ದೇವಾಲಯಗಳಿಗೆ ದತ್ತಿಯನ್ನು ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ವೈಶ್ಯರು ಸಾಮಾಜಿಕ ವ್ಯವಸ್ಥೆಯಲ್ಲಿ ತೃತೀಯ ಸ್ಥಾನವನ್ನು ಹೊಂದಿದ್ದರು. ಇವರು ವ್ಯಾಪಾರವನ್ನು ಮೈಗೂಡಿಸಿಕೊಂಡಿದ್ದರು. ಭಾರತವು ಕೃಷಿ ಪ್ರಧಾನ ನಾಡಾಗಿದ್ದರಿಂದ ಜನತೆ ಕೃಷಿಯನ್ನು ಅವಲಂಬಿಸಿದ್ದರು. ಸಂತೆ ಮತ್ತು ಜಾತ್ರೆಗಳಲ್ಲಿ ಇವರು ವ್ಯಾಪಾರವನ್ನು ನಡೆಸುತ್ತಿದ್ದರು. ಅಲ್ಲದೇ ಇವರು ವರ್ತಕರ ಸಂಘಗಳನ್ನು ಹೊಂದಿದ್ದರು. ಸಗರ ಶಾಸನದಲ್ಲಿ **'ಕಾಜಗಾರ ಸೆಟ್ಟಿ'**, ಸಿರಿವ್ರೊಳಲು(ಸಿರವಾಳ) ಶಾಸನದಲ್ಲಿ **'ನಾಲ್ವರು ಸೆಟ್ಟಿಯರು'**ಎಂಬ ಹೆಸರಿನ ಉಲ್ಲೇಖವಿರುವುದನ್ನು ಗಮನಿಸಬಹುದು.

ಶೂದ್ರರು ಸಮಾಜದ ಅತ್ಯಂತ ಕೆಳಸ್ತರದಲ್ಲಿದ್ದರು ಈ ವರ್ಗದ ಬಗ್ಗೆ ಹೆಚ್ಚಾಗಿ ಶಾಸನಗಳಲ್ಲಿ ಉಲ್ಲೇಖವಿಲ್ಲ. ಹಿಂದುಳಿದ ಪ್ರದೇಶವೆಂಬ ಹಣೆಪಟ್ಟಿಯನ್ನು ಕಟ್ಟಿಕೊಂಡಿರುವ ಈ ಪ್ರದೇಶದಲ್ಲಿ **೩೪,೯೧** ಜನ ಪರಿಶಿಷ್ಟ ಜಾತಿಯ ಜನಸಂಖ್ಯೆ[೧೫] ವಾಸಿಸುತ್ತಿದ್ದರೆ, **೧೫,೪೩೮** ಜನ ಪರಿಶಿಷ್ಟ ಬುಡಕಟ್ಟು ಜಾತಿಯ ಜನಸಂಖ್ಯೆಯು[೧೬] ತಾಲೂಕಿನಲ್ಲಿ (೧೯೯೧ರ ಜನಗಣತಿ ಆಧಾರ) ವಾಸವಾಗಿದ್ದಾರೆ. ಚತುರ್ವರ್ಣ ವ್ಯವಸ್ಥೆಯ ತರುವಾಯ ವೃತ್ತಿವಾರು ಜಾತಿಗಳು ಪ್ರಾರಂಭವಾದವು.

**ಅಗಸ** :- ಇವರು ಮಡಿವಾಳ, ದೋಬಿ, ಪರೀಟ್ ಎಂಬ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಬಟ್ಟೆ ಸ್ವಚ್ಛ ಮಾಡುವುದು ಇವರಿಗೆ ವಂಶ ಪಾರಂಪರ್ಯವಾಗಿ

ಬೆಳೆದುಬಂದಿದೆ. ಇವರು ಮಡಿವಾಳ ಮಾಚಿದೇವನನ್ನು ಪೂಜಿಸುತ್ತಾರೆ.

**ಗಾಣಿಗ** :– ಎಣ್ಣೆ ತೆಗೆಯುವುದು ಮಾರಾಟ ಮಾಡುವುದು ಇದು ಸಂಪ್ರದಾಯಿಕ ವೃತ್ತಿಯಾಗಿತ್ತು. ಇವರಲ್ಲಿ ಕರಿಗಾಣಿಗ, ಬಿಳಿಗಾಣಿಗ, ಸಜ್ಜನಗಾಣಿಗ ಎಂಬ ಉಪಪಂಗಡಗಳಿವೆ. ಇವರನ್ನು ಶಾಸನಗಳಲ್ಲಿ '**ತೆಲ್ಲಿಗರು**', '**ಗಾಣಿಗರು**', '**ತೇಟಿಗರು**', '**ಗಾಣದಯ**'[೧೭] ಎಂಬ ಹೆಸರುಗಳಿಂದ ಉಲ್ಲೇಖಗೊಂಡಿದ್ದಾರೆ.

**ಕಬ್ಬಲಿಗ (ಗಂಗಾಮತ)** :– ಮೀನು ಹಿಡಿಯುವುದು, ದೋಣಿ ಸಾಗಿಸುವುದು ಇವರ ಕಸುಬಾಗಿದ್ದು ಈ ತಾಲೂಕಿನಲ್ಲಿ ಈ ಜನಾಂಗದವರು ಹೆಚ್ಚಾಗಿ ಕಂಡುಬರುತ್ತಾರೆ. ಇವರು ಅಂಬಿಗರ ಚೌಡಯ್ಯನನ್ನು ಪೂಜಿಸುತ್ತಾರೆ.

**ಕಾಟಿಕ** :– ಇವರನ್ನು '**ಕಲಾಲ್**' ಎಂದು ಕರೆಯುತ್ತಾರೆ. ಇವರು ಈ ತಾಲೂಕಿನಲ್ಲಿ ಅಲ್ಪಸಂಖ್ಯಾಂತರಾಗಿದ್ದಾರೆ. ಮಾಂಸ ಮಾರುವುದು, ಶರಾಬನ್ನು ತಯಾರಿಸುವುದು ಇವರ ವೃತ್ತಿಯಾಗಿದೆ. ಇವರನ್ನು '**ಶೇರೆಗಾರ**'ರೆಂದು ಕರೆಯುತ್ತಾರೆ. ಕೆಲವೊಂದು ಪ್ರದೇಶದಲ್ಲಿ 'ಸಿಕಾಲಗಾರ' ಎಂದೂ ಕರೆಯುತ್ತಾರೆ. ಇವರು '**ಸೂರ್ಯನ**' ಆರಾಧಕರಾಗಿದ್ದಾರೆ.[೧೮]

**ಕುರುಬ** :– ಕುರಿ ಸಾಕಣೆ ಮತ್ತು ಕಂಬಳಿ ನೇಯುವುದು ಇವರ ಸಾಂಪ್ರದಾಯಕ ವೃತ್ತಿಯಾಗಿದೆ. ಇವರಲ್ಲಿ '**ಹತ್ತಿಕಂಕಣತ**', '**ಉಣ್ಣೆಕಂಕಣ**' ಎಂಬ ೨ ಪಂಗಡಗಳಿದ್ದು, ಇದರಲ್ಲಿ ವಿವಿಧ ಬೆಡಗುಗಳಿವೆ.[೧೯] ಈ ಜನಾಂಗದವರು ಹೆಗಲ ಮೇಲೆ ಕಂಬಳಿ, ತಲೆಗೆ ರುಮಾಲು ಸುತ್ತುತ್ತಾರೆ. ಡೊಳ್ಳಿನಕುಣಿತ ಇವರ ಪ್ರಿಯ ಕಲೆಯಾಗಿದೆ.

**ನೇಕಾರ** :– ಬಟ್ಟೆಗಳನ್ನು ನೇಯುವುದು ಇವರ ಕಸುಬಾಗಿದೆ. ಇವರಲ್ಲಿ '**ಪದ್ಮಸಾಳಿ**', '**ಸ್ವಕುಳಸಾಳಿ**' ಎಂಬ ಪಂಗಡಗಳಿವೆ.[೨೦] ಇವರು ಶಹಾಪುರ, ಸುರಪುರ, ತಾಲೂಕಿನಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

**ಬೇಡ** : ಇವರನ್ನು ವಾಲ್ಮೀಕಿ, ನಾಯಕ ಎಂಬ ಹೆಸರುಗಳಿಂದ ಕರೆಯತ್ತಾರೆ.

ಇವರಲ್ಲದೆ ತಾಲೂಕಿನಲ್ಲಿ ಕುಂಬಾರ, ಕಂಬಾರ, ಚಲುವಾದಿ, ದರ್ಜಿ, ಲಂಬಾಣಿ, ಲಿಂಗಾಯತ, ವಿಶ್ವಕರ್ಮ, ಮುಸ್ಲಿಂ ಮತ್ತು ಪರಿಶಿಷ್ಟಜಾತಿ ಮತ್ತು ಪಂಗಡದವರು ಅನ್ಯೂನ್ಯೇತೆಯಿಂದ ಬದುಕುತ್ತಾರೆ.

**ಸತಿ ಪದ್ಧತಿ**

ಪತಿಯ ಮರಣಾನಂತರ ಪತ್ನಿಯು ಸಹಗಮನಗೊಳ್ಳುವ ಸತಿ ಪದ್ಧತಿ ಇಲ್ಲಿ ಜಾರಿಯಲ್ಲಿತ್ತು.

ಇದಕ್ಕೆ ನಿದರ್ಶನವೆಂಬಂತೆ ತಾಲೂಕಿನ '**ಕೊಂಕಲ್**' ಗ್ರಾಮದಲ್ಲಿ ಸತಿಪದ್ಧತಿಗೆ

ಸಂಬಂಧಿಸಿದ ಮಾಸ್ತಿಗಲ್ಲು ದೊರೆತಿದೆ.

**ಕುಟುಂಬ**

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವು ಒಂದು ಅಂಗವಾಗಿದ್ದು, ತಂದೆ ಮನೆಯ ಯಜಮಾನನಾಗಿರುತ್ತಾನೆ. ಇವನ ಆಜ್ಞೆಯನ್ನು ಕುಟುಂಬದ ಎಲ್ಲಾ ಸದಸ್ಯರು ಪಾಲಿಸುತ್ತಿದ್ದರು. ಸಾಮಾನ್ಯವಾಗಿ ಇಲ್ಲಿ ಪುರುಷ ಪ್ರಧಾನ ಕುಟುಂಬಗಳಿವೆ(ಇಲ್ಲಿನ ಯಾವುದೇ ಶಾಸನದಲ್ಲಿ ಮಹಿಳೆಯ ಬಗ್ಗೆ ಹೆಚ್ಚಾಗಿ ಉಲ್ಲೇಖಗಳಿಲ್ಲ). ಅವಿಭಕ್ತ, ವಿಭಕ್ತ ಎಂಬ ಎರಡು ಬಗೆಯ ಕುಟುಂಬ ಪದ್ಧತಿಗಳನ್ನು ಕಾಣಬಹುದು.

**ವಿವಾಹ**

ಕುಟುಂಬದ ಮುಖ್ಯ ಘಟ್ಟವೇ ವಿವಾಹ. ಮನುಷ್ಯನಲ್ಲಿ ಕಂಡುಬರುವ ಲೈಂಗಿಕ ಆಸಕ್ತಿಯನ್ನು ಪೂರೈಸಿ ಸಂತಾನಾಭಿವೃಧಿಯನ್ನು ಹೊಂದುವ ಉದ್ದೇಶದಿಂದ ಸಮಾಜದಲ್ಲಿ ನೈತಿಕ ಚೌಕಟ್ಟಿನಲ್ಲಿ ಈ ವಿವಾಹ ಪದ್ಧತಿಗಳು ಪ್ರಾರಂಭಗೊಂಡವು. ವಿವಾಹ ಸಂದರ್ಭದಲ್ಲಿ ವಧುವಿನ ತಂದೆ ಕನ್ಯಾದಾನವನ್ನು ಮಾಡುವುದರ ಜೊತೆಗೆ ವರನಿಗೆ ದಕ್ಷಿಣೆಯನ್ನು(ವರದಕ್ಷಿಣೆ) ಕೊಟ್ಟು ವಿವಾಹವನ್ನು ಮಾಡಿಕೊಡುತ್ತಿದ್ದನು.

**ಹಬ್ಬಗಳು, ನಂಬಿಕೆ, ಸಂಪ್ರದಾಯ**

'ಚೈತ್ರ ಪವಿತ್ರ ಸಂಕ್ರಾಂತಿ', 'ಉತ್ತರಾಯಣ ಸಂಕ್ರಾಂತಿ', 'ಜೀವನಯಾಷ್ಟಮಿ' 'ಮಾರ್ಗಶಿರದ ಅಮವಾಸ್ಯೆ' 'ವ್ಯತೀಪಾತ ಜೇಷ್ಠದ ಅಮವಾಸ್ಯೆ', 'ಶ್ರಾವಣ', 'ಯುಗಾದಿ', 'ಮಹಾಪರ್ವ' ಆಚರಿಸುತ್ತಿದ್ದರು. ಯಂತ್ರ ಮಂತ್ರಗಳಲ್ಲಿ ನಂಬಿಕೆಯನ್ನು ಹೊಂದಿದವರಾಗಿದ್ದರು. ಹತ್ತಿದ ಬೆಂಕಿಯನ್ನು ನಂದಿಸುವುದು, ನೆಲದಲ್ಲಿ ನೀರು ತರಿಸುವುದು, ಮಾಟ, ಮಂತ್ರ, ಛಾಡಿ, ಚೇಳಿನ ವಿಷ ಇಳಿಸುವುದು, ಮರ ಸುತ್ತುವುದು, ಗ್ರಹಣಗಳ ಸಂದರ್ಭದಲ್ಲಿ ಮಕ್ಕಳನ್ನು ಮಣ್ಣಿನಲ್ಲಿ ಹೂಳಿ ಅಂಗವೈಕಲ್ಯ ನಿವಾರಣೆ, ಗರ್ಭಿಣಿ ಮಹಿಳೆಯರನ್ನು ಹೊರಗಡೆ ಬಿಡದೆ ಇರುವುದು, ನೆಲದಲ್ಲಿ ಮತ್ತು ಕೋಟೆಗಳಲ್ಲಿ ನಿಧಿ ಇರುವುದೆಂಬ ನಂಬಿಕೆ ಸಂಪ್ರದಾಯಿಕ ನಂಬಿಕೆಯನ್ನು ಹೊಂದಿದ್ದರು. ಸಮಾಜದ ಕಟ್ಟಳೆಗಳನ್ನು ಮೀರಿದ ವ್ಯಕ್ತಿಗಳನ್ನು ಬಹಿಷ್ಕರಿಸುತ್ತಿದ್ದರು ಮತ್ತು ಅವರು ಹೊಂದಿದ ಸ್ಥಾನಮಾನಗಳಿಂದ ಉಚ್ಚಾಟ್ಟಿಸುತ್ತಿದ್ದರು.

**ಜನಕಲ್ಯಾಣ ಕಾರ್ಯಗಳು**

ಪೂರ್ವಜರು ದಾರಿಹೋಕರಿಗಾಗಿ ನೀರಿನ '**ಅರವಂಟಿಗೆ**'ಯನ್ನು '**ಛತ್ರಗಳನ್ನು**' ಸ್ಥಾಪಿಸುತ್ತಿದ್ದರು. ಅರವಂಟಿಗೆ ಬಾಯಾರಿಕೆಯನ್ನು, ಛತ್ರಗಳು ಹಸಿವನ್ನು ದೂರ ಮಾಡುತ್ತಿದ್ದವು. ಈ ಛತ್ರಗಳು ಮಠಗಳಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದವು. ಮದ್ರಿಕಿ ಶಾಸನದಿಂದ ಇಂತಹ

ಜನಕಲ್ಯಾಣ ಕಾರ್ಯಗಳ ಬಗ್ಗೆ ತಿಳಿಸುತ್ತದೆ. ಸಾರ್ವಜನಿಕ ಉಪಯೋಗಕ್ಕಾಗಿ ಬಾವಿಗಳನ್ನು, ಕೆರೆಗಳನ್ನು ನಿರ್ಮಿಸುತ್ತಿದ್ದರು. ತಾಲೂಕಿನಲ್ಲಿ ದೊರೆಯುವ ಪರ್ಶಿಯನ್ ಶಾಸನಗಳಿಂದ ಕೆರೆ ಬಾವಿಗಳನ್ನು ನಿರ್ಮಿಸುತಿದ್ದರು ಎಂಬ ವಿಷಯ ತಿಳಿಯುತ್ತದೆ. ಮುಸ್ಲಿಂಮರು ಹೆಚ್ಚಾಗಿ ನೀರಿನ ಬಗ್ಗೆ ಕಾಳಜಿಯನ್ನು ಹೊಂದಿದ್ದರು ಎಂದು ಈ ಶಾಸನಗಳಿಂದ ತಿಳಿದುಬರುತ್ತದೆ.

## ೨.೩ ಆರ್ಥಿಕ ವ್ಯವಸ್ಥೆ

ಶಹಾಪುರವು ಆರ್ಥಿಕವಾಗಿ ವೈಭವಾತಿಶಯಗಳಿಂದ ಕೂಡಿತ್ತು ಎನ್ನುವುದಕ್ಕೆ ಶಾಸನ ಮತ್ತು ದಾನದತ್ತಿ, ತಾಮ್ರಪತ್ರಗಳು ಆಧಾರದಿಂದ ತಿಳಿದುಬರುತ್ತದೆ. **೨ನೇ ಕೃಷ್ಣನ 'ಸಿರಿವೊಳಲು' (ಸಿರವಾಳ) ಶಾಸನವು** ಸಿರವಾಳ ಅದೆಷ್ಟು ಸಂಪದ್ಭರಿತವಾಗಿತ್ತು ಎನ್ನುವುದನ್ನು ವಿವರಿಸುತ್ತದೆ.

**ಕೃಷಿ**

ಕೃಷಿ ತಾಲೂಕಿನ ಪ್ರಧಾನ ಕಸುಬಾಗಿದ್ದು, ಇದಕ್ಕೆ ರೈತರು ಮಳೆಯನ್ನು ಆಧರಿಸಿದ್ದರು, ಅಲ್ಲದೆ ಕೆಲ ರಾಜ ವಂಶಸ್ಥರು ಕೆರೆಗಳನ್ನು ನಿರ್ಮಿಸಿ ಕೃಷಿಗೆ ಸಹಕರಿಸಿದ್ದರು. ಜನತೆಯ ಪ್ರಮುಖ ಆಧಾಯದ ಮೂಲವೇ ಕೃಷಿಯಾಗಿತ್ತು ಜೊತೆಗೆ ಪಶುಸಂಗೋಪನೆಯನ್ನು ಮಾಡುತ್ತಿದ್ದರು ಎಂದು ತಿಳಿಯುತ್ತದೆ.

ಕೃಷಿ ಯೋಗ್ಯವಾದ ಭೂಮಿಯನ್ನು **"ಕೆಯ್"** ಎಂದು ಕರೆಯುತ್ತಿದ್ದರು. ನಮಗೆ ತಾಲೂಕಿನಲ್ಲಿ ದೊರೆತ ಶಾಸನಗಳ ಆಧಾರದಿಂದ **'ಒಣ ಭೂಮಿ ಕೆಯ್ಯ ಮತ್ತರ್'**,[೨೧] **'ಮಡಿಯಲ್ಲಿರುವುದು ಮೊರಡಿ ಮೊತ್ತರು'**, **'ಎಡೆಯಪುರದ ಪಕ್ಕದ್ದು ಎಡೆವೊಳಲ ಪೊಲ'**, **'ನೀರ ಪರಿಯ ಭೂಮಿ'**[೨೨] ಮುಂತಾದ ವಿಧಗಳಾಗಿ ವಿಂಗಡಿಸಿದ್ದಾರೆ.

ಕೃಷಿಕರು ತಮ್ಮದೆಯಾದ ಸಂಘಗಳನ್ನು ಹೊಂದಿದ್ದರು. **'ಅಳುವತ್ತೆತ್ತಿನ ನೆರೆವೊಕ್ಕಲು'**[೨೩] ಎಂಬ ಸಂಘವನ್ನು ಹೊಂದಿದ್ದರು ಎಂದು ತಿಳಿಯುತ್ತದೆ. ಜೊತೆಗೆ ಕೃಷಿಕರಿಗೆ **"ಒಕ್ಕಲದೆರೆ"** ಎಂಬ ತೆರಿಗೆಯನ್ನು ವಿಧಿಸುತ್ತಿದ್ದರು. ತಿಪ್ಪೆಗಳ ಮೇಲೆಯೂ ಸುಂಕ[೨೪]ವನ್ನು ಹಾಕುತ್ತಿದ್ದರು. ಸದ್ಯ (೧೯೯೧ರ ಜನಗಣತಿ ಆಧಾರ) ಕೃಷಿಕರು ೧.೩೫.೮೫೭ ಹೆಕ್ಟೇರ್ ಭೂಮಿಯನ್ನು ಕೃಷಿಗಾಗಿ ಬಳಸುತ್ತಿದ್ದಾರೆ[೨೫]

**ಪಶುಸಂಗೋಪನೆ**

ಕೃಷಿಯ ಜೊತೆಗೆ ಪಶುಸಂಗೊಪನೆಯನ್ನು ಮಾಡುತ್ತಿದ್ದರು. ಅವರು ಆಕಳು, ನಾಯಿ, ಕತ್ತೆ,[೨೬] ಕುದುರೆ, ಕೋಣ ಮುಂತಾದವುಗಳನು ಸಾಕುತ್ತಿದ್ದರು. ಹೈನುಗಾರಿಕೆಗಾಗಿ ಎಮ್ಮೆಗಳನ್ನು ಸಾಕುತ್ತಿದ್ದರು.

**ನೀರಾವರಿ**

ಮಳೆಯ ನೀರಿನ ಬೇಸಾಯದ ಜೊತೆಗೆ ನೀರಾವರಿ ವ್ಯವಸ್ಥೆಯನ್ನು ಜನತೆ ಬಲ್ಲವರಾಗಿದ್ದರು. ಅವರು ವಾರ್ಷಿಕವಾಗಿ ಎರಡು ಬೆಳೆಗಳನ್ನು ಬೆಳೆಯುತ್ತಿದ್ದರು. ಈ ನೀರಾವರಿಯು ವಿವಿಧ ಮೂಲಗಳಿಂದ ನಡೆಯುತ್ತಿತ್ತು. ಕೆರೆ, ಬಾವಿ, ಕೊಳಗಳ, ಮೂಲಕ (ಇತ್ತೀಚೆಗೆ ಕಾಲುವೆಗಳ ಮೂಲಕ ನಿರಾವರಿ ಪದ್ಧತಿ) ಜಾರಿಯಲ್ಲಿತ್ತು.

ದೊರನಹಳ್ಳಿ(ಪರ್ಶಿಯನ್ ಶಾಸನ), ಅಣಬಿಯಲ್ಲಿನ ಶಾಸನಗಳಲ್ಲಿ ತಿಳಿಸಿರುವಂತೆ **'ಮರಳು'**(ಮಸುಬು), 'ಎರೆ' ಭೂಮಿಗಳನ್ನು ಹೆಸರಿಸಿವೆ. ಸದ್ಯ ತಾಲೂಕಿನಲ್ಲಿ (೧.ಜ.೮) ಕಾಲುವೆಗಳ ಮೂಲಕ ೨೦,೪೧೫, ಕೆರೆಗಳ ಮೂಲಕ ೨೭೨, ಹಾಗೂ ಬಾವಿಗಳ ಮೂಲಕ ೨,೧೨೦ ಹೆಕ್ಟೇರ್ ಭೂಮಿಯು ನೀರಾವರಿಗೆ ಒಳಪಟ್ಟಿತ್ತು.[೨೭]

**ಧಾನ್ಯಗಳು**

ಮೆಣಸು, ಅಡಕೆ, ಎಲೆ, ಭತ್ತ, ಅರಿಸಿಣ,[೨೮] ಜೋಳ, ಹುಣಸೆ, ದಸರಿ(ರೇಷ್ಮೆ), ಎಳ್ಳು, ನಿಂಬೆ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು.

**ಮಾರುಕಟ್ಟೆ**

**'ಊರೊಳಗೆ'** ಮತ್ತು **'ಪೊರರಣ'**[೨೯] ಎಂಬ ಎರಡು ಬಗೆಯ ಮಾರುಕಟ್ಟೆಗಳಿಂದ್ದವು ಎಂಬುದನ್ನು ಸಗರ, ಸಿರಿವೊಳಲ ಶಾಸನಗಳಲ್ಲಿ ಪ್ರಸ್ತಾಪಗೊಂಡಿದೆ. ಅಲ್ಲದೆ ಸಿರಿವೊಳಲಲ್ಲಿ **'ರಾಜ–ರಾಣಿಯರ ಮಳಿಗೆ'** ಇದ್ದವೆಂದು ತಿಳಿಯುತ್ತದೆ.

ಸಗರ ಶಾಸನದಲ್ಲಿ **'ಮಾವು'**, **'ಮಾಣಿಕ್ಯ'**ಗಳನ್ನು ಮಾರಾಟ ಮಾಡುತ್ತಿದ್ದರು ಎಂಬ ಉಲ್ಲೇಖವಿದೆ.

**ಸಂಘಗಳು**

**'ಭಲುಂಕೆದಣ್ಣ ಹಸ್ತರೂ'**,[೩೦] **'ಅಯ್ಯವೊಳೆಪುರ ವರೇಶ್ವರರು'**,[೩೧] **'ಐನೂರ್ಬ್ಬರು'**[೩೨] ಎಂಬ ಸಂಘಗಳು ಜಾರಿಯಲ್ಲಿದ್ದವು.

**ವರ್ತಕರು**

'ಐನೂರ್ವ್ವರು', 'ತಳದ ಬಣಂಜಿಗರು',[೩೩] 'ಬಳಂಜುಗಳೈಯ್ನೂರ್ವರು',[೩೪] 'ಸೆಟ್ಟಿಯರುಂ–ಸೆಟ್ಟಿಗುತ್ತರುಂ',[೩೫] 'ಸಿರಿವೊಳಲು ನಾಲ್ವರು ಸೆಟ್ಟಿಯರು',[೩೬] ಕಾಜಗಾರ ಸೆಟ್ಟಿ'(ಬಳೆ ವ್ಯಾಪಾರಿ)[೩೭] 'ನಾನದೇಶಾವ್ಯನ್ತರದ ಗವರೆಗಳುಂ ಗಾತ್ರಿಗರುಂ'(ವೀಳೆದೆಲೆ ವ್ಯಾಪಾರಿ)[೩೮] ಮುಂತಾದ ವರ್ತಕರ ಬಗ್ಗೆ ಈ ತಾಲೂಕಿನ ಶಾಸನಗಳಲ್ಲಿ ಉಲ್ಲೇಖವಿದೆ.

**ಸಾರಿಗೆ**

ಅಣಬಿಯಲ್ಲಿ ದೊರೆತ ಬೌದ್ಧ ಶಿಲಾ ಫಲಕದಲ್ಲಿ ಎತ್ತುಗಳನ್ನು ಹೂಡಿರುವ ಬಂಡಿಯ

ಚಿತ್ರವು ಲಭ್ಯವಿದ್ದು ಅದರ ಸಹಾಯದಿಂದ ಎತ್ತುಗಳನ್ನು ಸಾರಿಗೆ ಸಾಧನವಾಗಿ ಬಳಸುತ್ತಿದ್ದರು J Az À w¾AiÄÄv¤É **ಎತ್ತು, ಕುದುರೆ, ಕೋಣ, ಕತ್ತೆ, ಬಂಡಿ**[೩೯] ಇವುಗಳು ಸಾರಿಗೆ ಸಾಧನಗಳಾಗಿದ್ದವು.

**ನಾಣ್ಯಗಳು**

ಹಾರಣಗೆರೆಯಲ್ಲಿ '**ಶಾತವಾಹನರ ನಾಣ್ಯಗಳು**' ದೊರಕಿವೆ. ಅಲ್ಲದೆ '**ಗದ್ಯಾಣ**', '**ದೇವನಾಸ್**', '**ವೀಸ್**' ಎಂಬ ನಾಣ್ಯಗಳು ಚಲಾವಣೆಯಲ್ಲಿದ್ದವು.

**ಅಳತೆ**

ತಾಲೂಕಿನ ಶಾಸನಗಳಲ್ಲಿ ಹೆಚ್ಚಾಗಿ ಅಳತೆಯ ಬಗ್ಗೆ ಉಲ್ಲೇಖ ಇಲ್ಲದಿದ್ದರೂ ಸಹ ಸಗರ ಶಾಸನದಲ್ಲಿ ಅಳೆಯಲು '**ವೀಸಾ**', '**ಬಳ್ಳ**', '**ಮಾನ**' ಎಂಬ ಅಳತೆ ಮಾಪನಗಳಿದ್ದವು.

ಭೂಮಿಯ ಮಾಪನಕ್ಕಾಗಿ : 'ಇರ್ಪ್ಪತೆಂಟು ಸಿಂಗನ ಗರುಡನಗಳ್',[೪೦] 'ನಾಲ್ವತ್ತುಗೇಣುಕೋಲು', 'ಅಯ್ವತ್ತು ಗೇಣ ಅಣ್ಣನಂಕಕಾಳನ ಘಳ', 'ಗೇಣ ಕೋಲ' 'ಮಾನ್ಯಗೋಲ' ಮುಂತಾದವು ಬಳಕೆಯಲ್ಲಿದ್ದವು ಎಂದು ತಾಲೂಕಿನಲ್ಲಿ ದೊರೆತ ಶಾಸನಗಳಿಂದ ತಿಳಿಯುತ್ತದೆ.

**ತೆರಿಗೆ**

ರಾಜ್ಯದ ಆದಾಯದ ಮೂಲವೇ ತೆರಿಗೆಯಾಗಿತ್ತು. 'ಕೆಳೆಗಳ ಮರ್ಯಾದೆ', '**ಅರುವತ್ತೆತ್ತಿನ ನೆಳವೊಕ್ಕಲು ಒಕ್ಕಲುದೆರೆ ಕೋಡೆಬಳ್ಳಿ ಬಾಳೆಕುಳಿಯ ಸುಂಕ**', '**ಕಲ್ಲಕಣಿ ಅರುವಣ**' ಇವು ಭೂಮಿಯ ತೆರಿಗೆಗಳಾಗಿದ್ದವು. '**ಅಷ್ಟಭೋಗ ತೇಜಸಾಮ್ಯ**', '**ದಂಡದೋಷ**', '**ಕಾಹು**', '**ಕಾಣಿಕೆಗಳು**' ಇವು ಇತರ ಸಾಮಾಜಿಕ ತೆರಿಗೆಗಳಾಗಿದ್ದವು. ವ್ಯಾಪಾರ ತೆರಿಗೆ, ವೃತ್ತಿ ತೆರಿಗೆ, ಸಾರಿಗೆ ತೆರಿಗೆ ಬಗ್ಗೆ ತಾಲೂಕಿನ ಶಾಸನಗಳಲ್ಲಿ ಉಲ್ಲೇಖವಿಲ್ಲ.

## ೨.೪ ಧಾರ್ಮಿಕ ವ್ಯವಸ್ಥೆ

ಸಗರನಾಡು ಪರಧರ್ಮಸಹಿಷ್ಣುತೆ, ಪರಸ್ಪರ ಬಾಂಧವ್ಯ, ಧರ್ಮಶ್ರದ್ಧೆ, ಭಾವೈಕ್ಯತೆಗೆ ಹೆಸರುವಾಸಿಯಾದ ನಾಡಾಗಿತ್ತು. ಇಲ್ಲಿ ಬ್ರಾಹ್ಮಣರು, ಶೈವರು, ಜೈನರು, ಬೌದ್ಧರು ಒಂದೇ ಜನಾಂಗದವರಂತೆ ಬಾಳುತ್ತಿದ್ದರು. ನಂತರದ ದಿನಗಳಲ್ಲಿ ಮುಸ್ಲಿಂಮರು ಈ ವ್ಯವಸ್ಥೆಯ ಒಂದು ಭಾಗವಾಗಿ ಅನ್ಯೂನ್ಯೇ ಸಂಬಂಧ ಹೊಂದಿದ್ದರು. ಇದಕ್ಕೆ ನಿದರ್ಶನ ಡಿಗ್ಗಿ ಸಂಗಮೇಶ್ವರ ಮತ್ತು ಗೋಗಿ ಚಂದಾ ಹುಸ್ಸೈನಿ ದರ್ಗಾ ಮತ್ತು ದೇವಾಲಯಗಳ ವಾಸ್ತುಶಿಲ್ಪಗಳು ಸಾಕ್ಷಿಯಾಗಿದೆ. ಇಂದು ಸಹ ಮೊಹರಂ ಸಂದರ್ಭದಲ್ಲಿ ಹಿಂದೂ ಮುಸ್ಲಿಮರು ಒಂದುಗೂಡಿ 'ಬುಲಾಯಿ' ಹಾಡುಗಳನ್ನು ಹಾಡುತ್ತಾರೆ. 'ಅಲಾಯಿ' ದೇವರುನ್ನು ಪ್ರತಿಷ್ಟಾಪಿಸಿ ಪೂಜಿಸುತ್ತಾರೆ.

**ಬೌದ್ಧ ಧರ್ಮ**

ಶಿಲಾ ಫಲಕಗಳು ಮತ್ತು ತಾಲೂಕಿನ ಅಣಬಿ, ಸಿರವಾಳ, ರೋಜಾ ಗ್ರಾಮಗಳಲ್ಲಿ ದೊರಕಿರುವ ಸ್ತಂಭ ಶಾಸನ ಹಾಗೂ ಕುರುಹುಗಳು ಬೌದ್ಧ ಧರ್ಮಕ್ಕೆ ಸಂಬಂಧಿಸಿವೆ. ಇವುಗಳ ಆಧಾರದಿಂದ ಬೌದ್ಧ ಧರ್ಮವು ಪ್ರಚಲಿತದಲ್ಲಿತ್ತು ಎಂದು ತಿಳಿದುಬರುತ್ತದೆ. ಇದರಿಂದ ಬೌದ್ಧ ಧರ್ಮದ ಇತಿಹಾಸವು ೨ನೇ ಶತಮಾನದಷ್ಟು ಹಿಂದಕ್ಕೆ ಸರಿಯುತ್ತದೆ. ಆದರೆ ತಾಲೂಕಿನಲ್ಲಿ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಯಾವುದೇ ಲಿಖಿತ ದಾಖಲೆಗಳಿಲ್ಲ.

**ಜೈನ ಧರ್ಮ**

ಶ್ರೀ ಮತ್ಪರಮ ಗಂಭಿರ ಸ್ಯಾದ್ವಾದಾಮಘಘ ಲಾಂಛನಂ
ಜೀಯಾತ್ರೈಳೋಕ್ಯನಾಥಸ್ಯ ಶಾಸನಂ ಜಿನ ಶಾಸನ ॥

ಜಿನ ಶಾಸನಗಳ ಪ್ರಾರ್ಥನಾ ಶ್ಲೋಕ ಇದಾಗಿದೆ. ನಮಗೆ ಗೋಗಿ ಮತ್ತು ಸಿರವಾಳಗಳಲ್ಲಿ ದೊರಕಿರುವ ಜೈನ ಪ್ರತಿಮೆಗಳ ಸಹಾಯದಿಂದ ಮತ್ತು ಚಾರಣಗೆರೆ ಗ್ರಾಮದಲ್ಲಿ ಜೈನಮುನಿಗಳು ಆಚರಿಸುವ ಸಲ್ಲೇಖನ ವ್ರತದ ಪ್ರತೀಕಗಳಾದ ಜೈನಬಿಂಬ, ಪಿಂಚಿ, ಕಮಂಡಲಗಳನ್ನು ಕಾಣಬಹುದು. ಗೋಗಿಯಲ್ಲಿ ದಿಗಂಬರ ಪಂಥಕ್ಕೆ ಸಂಬಂಧಿಸಿದ **'ಪರ್ಯೋಗ್ಗಣದ ಧರ್ಮ ಕೀರ್ತಿ ದೇವರಿದ್ದರು'** ಎಂಬ ಬರಹದ ಸಹಾಯದಿಂದ ತಾಲೂಕಿನಲ್ಲಿ ಜೈನ ಧರ್ಮ ಪ್ರಚಲಿತದಲ್ಲಿತ್ತು ಎಂದು ತಿಳಿಯುತ್ತದೆ. ಆದರೆ ತಾಲೂಕಿನಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ದಾಖಲೆಗಳು ಹೆಚ್ಚಾಗಿ ಕಂಡುಬರುವುದಿಲ್ಲ.

**ವೈಷ್ಣವ ಧರ್ಮ**

ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ
ದಕ್ಷಿಣೋನ್ನತದಂಷ್ಟಾಗ ವಿಶ್ರಾಂತಭುವನಂವಪು ॥

ಇದು ವೈಷ್ಣವ ಶಾಸನಗಳ ಆರಂಭಿಕ ಶ್ಲೋಕವಾಗಿದೆ. ತಾಲೂಕಿನಲ್ಲಿ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಕುರುಹುಗಳು ತೀರಾ ವಿರಳ. ಈ ಪ್ರದೇಶವನ್ನು ಅಧೀನಕ್ಕೊಳಪಡಿಸಿಕೊಂಡು ಆಳ್ವಿಕೆ ನಡೆಸಿದ ಕಲ್ಯಾಣ ಚಾಲುಕ್ಯರು ವೈಷ್ಣವ ಮತಾವಲಂಬಿಗಳಾಗಿದ್ದರು. ಈ ತಾಲೂಕಿನಲ್ಲಿ ಲಭ್ಯವಿರುವ ಅಗ್ರಹಾರ, ಘಟಿಕಾಸ್ಥಾನಗಳ ಆಧಾರದ ಮೇಲೆ ವೈಷ್ಣವ ಧರ್ಮವು ಈ ಪ್ರದೇಶದಲ್ಲಿ ಜಾರಿಯಲ್ಲಿತ್ತು ಎಂದು ತಿಳಿದುಬರುತ್ತದೆ. ಮದ್ರಿಕಿ, ಅಣಬಿ ಶಾಸನಗಳಲ್ಲಿ ಅಗ್ರಹಾರದ ಉಲ್ಲೇಖವನ್ನು ಕಾಣಬಹುದಾಗಿದೆ.

**ಶೈವ ಧರ್ಮ**

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ

ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೇ ॥

ಇದು ಶೈವ ಶಾಸನಗಳ ಪ್ರಾರಂಭಿಕ ಶ್ಲೋಕ. ತಾಲೂಕಿನಲ್ಲಿ ಶೈವ ಧರ್ಮದ **'ಕಾಳಾಮುಖ'**, **'ಲಕುಲೀಶ'**, **'ಪಾಶುಪತ'** ಎಂಬ ಉಪಪಂಗಡಗಳಿದ್ದವು. 'ಕಿರಾತಾರ್ಜುನರ ಪಾಶುಪತಾಸ್ತ್ರ ಪ್ರಸಂಗ ಪ್ರಸಿದ್ಧವಾಗಿದ್ದು ಅದು ಸಿರವಾಳದ ಸುಜ್ಞಾನಿಬಾವಿ(ಬಾರಂಬಾವಿ)ಯ ಶಿಲ್ಪದಿಂದ ತಿಳಿದುಬರುತ್ತದೆ. ಅಲ್ಲದೆ ಲಕುಲೀಶನ ಕೈಯಲ್ಲಿ ಲಗುಡವನ್ನು ಹಿಡಿದು ಕುಳಿತ ಭಂಗಿಯಲ್ಲಿರುವ ಮೂರ್ತಿಶಿಲ್ಪವನ್ನು ಇಲ್ಲಿ ಕಾಣಬಹುದು.

ಸಗರದ ನಗರೇಶ್ವರ ಮಠದ ಆಚಾರ್ಯ ಅನನ್ಯ ಶಕ್ತಿ ಸಿದ್ಧಾಂತ ದೇವರು ಕಾಳಾಮುಖ ಮಹಾವ್ರತ, ಪಾಶುಪತಶೈವ ಸಮಾನ ಪಕ್ಷಪಾತರೆನಿಸಿದ್ದರು ಎಂಬ ಅಂಶವನ್ನು ತಿಳಿಯಬಹುದು. ಸಂಗಮ ಗ್ರಾಮದಲ್ಲಿ "ಲಾಕುಳ ಶೈವರ ಸಂಗವಳ್ಳಿಯ ಮೂರು ಕೋಣೆಯ ಮಠ ಹೊಂದಿತ್ತು. ಇಲ್ಲಿನ ಶಾಸನಗಳಲ್ಲಿ ಅಡಗಿರುವ ಅಂಶಗಳ ಆಧಾರದಿಂದ ಶೈವ ಧರ್ಮವು ಪ್ರಚಲಿತದಲ್ಲಿತ್ತು ಎಂದು ತಿಳಿದುಬರುತ್ತದೆ. ಮಠಗಳು, ದೇವಾಲಯಗಳ ಆಧಾರದ ಮೇಲೆಯೂ ಶೈವಧರ್ಮವನ್ನು ಗುರುತಿಸಬಹುದು.

ಕಾಳಾಮುಖ ತಪೋಧನಾಗ್ರಗಣ್ಯ ಕೆಸ್ಲಿಲೆಯ ಶಿಗತಗಿಸ ದೇವರು ಧರಿಯಾಪುರದ ಕೆರೆ ಕಟ್ಟಿಸಿದ್ದಾನೆ. ಇದರಿಂದ ಜನತೆಯ ಒಳಿತಿಗಾಗಿ ಜನಕಲ್ಯಾಣ ಕಾರ್ಯಗಳನ್ನು ನಡೆಸುತ್ತಿದ್ದರು ಎನ್ನುವುದಕ್ಕೆ ಇದು ನಿದರ್ಶನವಾಗಿದೆ.

**ಇಸ್ಲಾಂ ಧರ್ಮ**

ಹೈದರಾಬಾದ ಕರ್ನಾಟಕ ಭಾಗಕ್ಕೆ ಮಧ್ಯಕಾಲೀನ ಚರಿತ್ರೆ ಎಂದರೆ ಇಸ್ಲಾಂಯುಗವೆಂದು ಕರೆಯಬಹುದು. ಈ ಧರ್ಮೀಯರು ಪವಿತ್ರ ಕುರಾನನ್ನು ಮಹತ್ವದಿಂದ ಕಾಣುತ್ತಿದ್ದರು. ಧರ್ಮದ ಆಚರಣೆಯಲ್ಲಿ ಕುರಾನಿನ ತತ್ವಗಳನ್ನು ಬಳಸುತ್ತಿದ್ದರು. ಇಸ್ಲಾಂ ಧರ್ಮವು ಪ್ರಚಲಿತದಲ್ಲಿತ್ತು ಎಂಬುದು ತಾಲೂಕಿನಲ್ಲಿ ದೊರೆಯುವ ಶಾಸನಗಳಿಂದ, ವಾಸ್ತುಶಿಲ್ಪ, ಮಸೀದಿಗಳಿಂದ ತಿಳಿದುಬರುತ್ತದೆ.

ಇವರು ಜನಕಲ್ಯಾಣಕ್ಕಾಗಿ ಮತ್ತು ಜಲವೃದ್ಧಿಗಾಗಿ ಬಾವಿಗಳನ್ನು ತೋಡಿಸುತ್ತಿದ್ದರು ಎಂಬುದು ಇವರ ಶಾಸನಗಳಿಂದ ತಿಳಿದುಬರುತ್ತದೆ.

**ಟಿಪ್ಪಣಿ**

೧೧. ಡಿ.ಎನ್,ಅಕ್ಕಿ, ಸ.ಸಿ, ಪುಟ : ೫೯

೧೨. ಹನುಮಾಕ್ಷಿ ಗೋಗಿ, ಕ.ಜಿ.ಶಾ – ಸಿರವಾಳ, ಪುಟ : ೪೩೭

೧೩. ಅದೇ , ಕ.ಜಿ.ಶಾ – ಅಣಬಿ, ಪುಟ : ೩೯೧

೧೪. ಅದೇ, ಕ.ಜಿ.ಶಾ – ಮದ್ರಿಕಿ, ಪುಟ : ೪೧೬

೧೫. ಎಂ.ಬಿ.ಪಾಟೀಲ್, ಗು.ಜಿ.ಗ್ರಾ, ಪುಟ : ೧೩೬

೧೬. ಅದೇ, ಪುಟ : ೧೩೮

೧೭. ಹನುಮಾಕ್ಷಿ ಗೋಗಿ, ಕ.ಜಿ.ಶಾ – ತಳಬಿಡಿ, ಪುಟ : ೩೯೯

೧೮. ಎಂ.ಬಿ.ಪಾಟೀಲ್, ಗು.ಜಿ.ಗ್ರಾ, ಪುಟ : ೧೫೧–೧೫೨

೧೯. ಅದೇ, ಪುಟ : ೧೫೨

೨೦. ಅದೇ, ಪುಟ : ೧೫೪

೨೧. ಹನುಮಾಕ್ಷಿ ಗೋಗಿ, ಕ.ಜಿ.ಶಾ – ಮದ್ರಿಕಿ, ಪುಟ : ೪೧೭

೨೨. ಅದೇ, ಕ.ಜಿ.ಶಾ – ಭೀಮರಾಯನ ಗುಡಿ, ಪುಟ : ೪೧೪

೨೩. ಅದೇ, ಕ.ಜಿ.೦ಶಾ – ಸಿರವಾಳ, ಪುಟ : ೪೪೩

೨೪. ಅದೇ, ಕ.ಜಿ.ಶಾ – ಸಿರವಾಳ, ಪುಟ : ೪೪೩

೨೫. ಎಂ.ಬಿ.ಪಾಟೀಲ್, ಗು.ಜಿ.ಗ್ರಾ, ಪುಟ : ೧೮೧

೨೬. ಹನುಮಾಕ್ಷಿ ಗೋಗಿ, ಕ.ಜಿ.ಶಾ – ಮದ್ರಿಕಿ, ಪುಟ : ೪೧೭

೨೭. ಎಂ.ಬಿ.ಪಾಟೀಲ್, ಗು.ಜಿ.ಗ್ರಾ, ಪುಟ : ೨೦೩

೨೮. ಹನುಮಾಕ್ಷಿ ಗೋಗಿ, ಕ.ಜಿ.ಶಾ – ಸಗರ, ಪುಟ : ೪೩೪

೨೯. ಎಂ.ಯಾಸಿನ್ ಖುದ್ದೋಸಿ ಮತ್ತು ಸಿತಾರಾಮ್ ಜಾಗಿರದಾರ, ಕ.ಪ.ಅ.ಮ.ಉ.ಶಾ – ದೋರನಹಳ್ಳಿ, ಪುಟ : ೧೫೪

೩೦. ಹನುಮಾಕ್ಷಿ ಗೋಗಿ, ಕ.ಜಿ.ಶಾ – ಸಗರ, ಪುಟ : ೪೩೩–೩೪

೩೧. ಅದೇ, ಕ.ಜಿ.ಶಾ – ಸಗರ, ಪುಟ : ೪೩೩–೩೪

೩೨. ಅದೇ, ಕ.ಜಿ.ಶಾ – ಸಿರವಾಳ, ಪುಟ : ೪೪೩

೩೩. ಎಂ.ಶಿವಾನಂದ, ಹೈ.ಕ.ಭಾ.ಕ.ಶಿ.ಶಾ – ಸಿರವಾಳ, ಪುಟ : ೧೫೮

೩೪. ಹನುಮಾಕ್ಷಿ ಗೋಗಿ, ಕ.ಜಿ.ಶಾ – ಸಗರ, ಪುಟ : ೪೩೫

೩೫. ಅದೇ, ಕ.ಜಿ.ಶಾ – ಸಗರ, ಪುಟ : ೪೩೩

೩೬. ಚನ್ನಬಸಪ್ಪ ಎಸ್ ಪಾಟಿಲ್ ಮತ್ತು ಬಾಲಸುಬ್ರಮಣ್ಯ, ಸಿರಿವಾಳ, ಪುಟ : ೧೩೮

೩೭. ಅದೇ, ಕ.ಜಿ.ಶಾ – ಸಗರ, ಪುಟ : ೪೩೫

೩೮. ಅದೇ, ಕ.ಜಿ.ಶಾ – ಸಗರ, ಪುಟ : ೪೩೩

೩೯. ಅದೇ, ಕ.ಜಿ.ಶಾ – ಸಗರ, ಪುಟ : ೪೩೩

೪೦. ಅದೇ, ಕ.ಜಿ.ಶಾ – ಅಣಬಿ, ಪುಟ : ೩೯೧

ಶಾಸನಗಳನ್ನು ಅವುಗಳಲ್ಲಿ ಅಡಗಿರುವ ವಿಷಯಗಳಿಗೆ ಅನುಗುಣವಾಗಿ ವಿಂಗಡಿಸಲಾಗಿದೆ.

ದಾನ ಶಾಸನ, ವೀರಗಲ್ಲು ಶಾಸನ, ಮಹಾಸತಿಗಲ್ಲು ಶಾಸನ, ನಿಷಧಿಗಲ್ಲು ಶಾಸನಗಳನ್ನಾಗಿ ವಿಂಗಡಿಸಲಾಗಿದೆ. ಈ ಪ್ರದೇಶದಲ್ಲಿ ಕಂಡುಬರುವ ಶಾಸನಗಳನ್ನು ಪರಿಚಯಿಸುವ ಕೆಲಸವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

## ೩.೧ ದಾನ ಶಾಸನಗಳು

ಪ್ರಾಚೀನ ಕಾಲದಲ್ಲಿ ಕನ್ನಡನಾಡಿನಲ್ಲಿ 'ದಾನ' ಮಹೋನ್ನತವಾದ ಮೌಲ್ಯವಾಗಿತ್ತು. ತಮ್ಮ ಹೆಸರುಗಳು ಚಿರವಾಗಿ ಅಜರಾಮರವಾಗಿ ಉಳಿಯಲಿ ಎಂಬ ಉದ್ದೇಶದಿಂದ ಧರ್ಮ ಕಾರ್ಯಗಳಿಗಾಗಿ ಪರೋಪಕಾರ್ಯಕ್ಕಾಗಿ ದಾನವನ್ನು ನೀಡುತ್ತಿದ್ದರು.

ದಾನದ ರೂಪದಲ್ಲಿ ಮಠಗಳಿಗೆ, ದೇವಾಲಯಗಳಿಗೆ, ವಿದ್ಯಾಕೇಂದ್ರಗಳಿಗೆ, ಭೂಮಿಯನ್ನು, ಗ್ರಾಮಗಳ ತೆರಿಗೆಯನ್ನು ದಾನವಾಗಿ ಕೊಡುತ್ತಿದ್ದರು. ಅಲ್ಲದೆ ಸಾರ್ವಜನಿಕರ ಹಿತಕ್ಕಾಗಿ ಕೆರೆ-ಬಾವಿಗಳನ್ನು ತೋಡಿಸುತ್ತಿದ್ದರು. ಅನ್ನಛತ್ರಗಳಿಗೆ ದಾನವನ್ನು ನೀಡುತ್ತಿದ್ದರು ಮತ್ತು ನಡೆಸುತ್ತಿದ್ದರು. ಪಂಡಿತನಿಗೆ ಮತ್ತು ಯುದ್ಧದಲ್ಲಿ ಜಯ ಪಡೆದ ಸೈನಿಕನಿಗೆ ದಾನವನ್ನು ನೀಡುತ್ತಿದ್ದರು.

### ೧. ಸಗರ ಶಾಸನಗಳು ೧

| | | |
|---|---|---|
| ಶಾಸನ ನಿವೇಶನ | : | ಶ್ರೀ ಶಂಕರಪ್ಪ ಪಡಶೆಟ್ಟಿಯವರ ಹಾಳು ದೊಡ್ಡಿ. |
| ರಾಜವಂಶ | : | ಕಲ್ಯಾಣ ಚಾಲುಕ್ಯ. |
| ಅರಸ/ಮಾಂಡಳಿಕರು | : | ಎರಡನೇ ಸೋಮೇಶ್ವರ, ರಾಣಿ ಕಂಚನದೇವಿ. |
| ಕಾಲ | : | ಶಕವರುಷ ೯೯೩ (ಕ್ರಿ.ಶ.೧೦೭೧ರಲ್ಲಿ). |
| ಭಾಷೆ/ಲಿಪಿ | : | ಕನ್ನಡ |
| ಧರ್ಮ | : | ಶೈವ. |

**ಸಾರಾಂಶ**

ಸಗರ ಗ್ರಾಮದ ಶ್ರೀ ಶಂಕರಪ್ಪ ಪಡಶೆಟ್ಟಿಯವರ ಹಾಳು ದೊಡ್ಡಿಯಲ್ಲಿ ದೊರೆತ ಈ ಶಾಸನವು ಕಲ್ಯಾಣ ಚಾಲುಕ್ಯ ದೊರೆಯಾದ ಎರಡನೇ ಸೋಮೇಶ್ವರನ ಆಳ್ವಿಕೆಯಲ್ಲಿ ಹೊರಡಿಸಿದ ಶಾಸನವಾಗಿದೆ. ಚಚ್ಚೌಕಾಕಾರದ ಕಂಬದ ನಾಲ್ಕು ಬದಿಗಳಲ್ಲಿ ಶಾಸನವನ್ನು ಕೊರೆಯಲಾಗಿದ್ದು ಕೊನೆಯಲ್ಲಿ ಶಾಪಾಶಯವನ್ನು ಒಳಗೊಂಡಿದೆ. ಒಟ್ಟು ೯೦ಕ್ಕೂ ಹೆಚ್ಚು ಸಾಲಿನಿಂದ ಕೂಡಿದ ಶಾಸನವಾಗಿದೆ.

**ಎರಡನೇ ಸೋಮೇಶ್ವರನು** ಕಂಪಿಲೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನು. ಆತನ ರಾಣಿಯಾದ **ಕಂಚನದೇವಿಯು** ಚೌಧರೆವಾಡದ '**ಪೊವಿನಕೆರೆ**'ಯ ಮೂಲಕ ಆಳ್ವಿಕೆಯನ್ನು ನಡೆಸುತ್ತಿದ್ದ ವಿಷಯವನ್ನು ಪ್ರಸ್ತುತ ಶಾಸನದಿಂದ ತಿಳಿದುಬರುತ್ತದೆ.

ಸಗರ ಗ್ರಾಮವು ಒಂದು ಪ್ರಮುಖ ವಿದ್ಯಾಕೇಂದ್ರವಾಗಿದ್ದು, ಅದನ್ನು ಶ್ರೀ ನಗರೇಶ್ವರ ದೇವರ ಮಠದ ಅಧೀನದಲ್ಲಿ ನಡೆಸುತ್ತಿದ್ದರು. ಪ್ರಸ್ತುತ ಶಾಸನದಿಂದ ವಿದ್ಯಾಕೇಂದ್ರಕ್ಕೆ ದಾನ ನೀಡಿದ ವಿಷಯ ತಿಳಿಯುತ್ತದೆ. ಶ್ರೀ ಮಠವು ಸರ್ವಧರ್ಮಗಳನ್ನು ಪೋಷಿಸುತ್ತಿದ್ದರು, ಮಠದ ಅಧಿಕಾರವನ್ನು ಪಡೆಯುವ ಪೀಠಾಧಿಶರು ಕಾಳಾಮುಖ, ಲಾಕುಳ, ಶೈವ ಸಿದ್ಧಾಂತಗಳನ್ನು ಅಭ್ಯಸಿಸಿ ಶ್ರೀಮತ್ ಅನಂತ ಶಕ್ತಿಯನ್ನು ಹೊಂದಿರುತ್ತಿದ್ದರು. ಇವರು ಸತ್ಯ, ಅಭಿಮಾನ, ದಾನ, ಪರೋಪಕಾರ, ಶೌಚ, ಆಚಾರ, ಚಾರಿತ್ರ್ಯ, ನಯ, ವಿನಯಗಳನ್ನು ಹೊಂದಿದ್ದರು ಎಂದು ಶಾಸನದಿಂದ ತಿಳಿಯುತ್ತದೆ. ಸಗರದಲ್ಲಿ ವರ್ತಕರಾಗಿದ್ದ 'ಗಾತ್ರಿಗರು', 'ಬೀರರು', 'ಬಾರಿಕರು', 'ಗನ್ದಿಗರು', ಗಾವುಣ್ಡ ಸ್ವಾಮಿಗಳು', 'ಸೆಟ್ಟಿಯರು', ' ಅಯ್ಯಾವೊಳೆ ಐನೂರ್ವರು ಪಂಡಿತರು', 'ಕಾಜಗಾರ ಸೆಟ್ಟಿಯರು' ಸಮಸ್ತ ವರ್ತಕರು ಸೇರಿ ಶಕವರುಷ ೯೯೩ನೆಯ (ಕ್ರಿ.ಶ.೧೦೭೧ರಲ್ಲಿ) ವಿರೋಧಿಕೃತ ಸಂವತ್ಸರದ ಜ್ಯೇಷ್ಠ ಶುದ್ಧ ಪಂಚಮಿಯ ಗುರುವಾರದಂದು ಶ್ರೀಮದ್ ಅನಂತ ಶಕ್ತಿ ಸಿದ್ಧಾಂತದೇವರ ಪಾದವನ್ನು ತೊಳೆದು ಶ್ರೀ ಮಠಕ್ಕೆ ದಾನವನ್ನು ನೀಡಿದರು ಎಂದು ತಿಳಿಯುತ್ತದೆ.

**ದಾನದ ಸ್ವರೂಪ**

* ಮಾರಾಟದ ಸಮಸ್ತ ವಸ್ತುಗಳ ಮೇಲೆ '**ಒಂದು ಗದ್ಯಾಣಕ್ಕೆ ಒಂದು ವೀಸಾ**'.
* ಮೆಣಸಿನ ಹೇರಿಗೆ '**ಒಂದು ಮಾನ ಮೆಣಸು**'.
* ಅಡಕೆಯ ಹೇರಿಗೆ '**೨೫ ಅಡಕೆ**'
* ಎಲೆಯ ಹೇರಿಗೆ '**೧೦೦ ಎಲೆ**'
* ತಲೆ ಹೊರೆಗೆ '**೫೦ ಎಲೆ**'

* ಒಂದು ಬಂಡಿ ಭತ್ತಕ್ಕೆ '೨ ಬಳ್ಳ'

* ಕೋಣದ ಹೇರಿಗೆ '೧ ಬಳ್ಳ'

* ಎತ್ತಿನ ಹೇರಿಗೆ '೨ ಮಾನ'

* ಕತ್ತೆಯ ಹೇರಿಗೆ '೨ ಮಾನ'[೪೧]

ಹೀಗೆ ಸಗರದ ಶ್ರಿ ನಗರೇಶ್ವರ ದೇವಾಲಯದ ಮಠದ ವಿದ್ಯಾದಾನಕ್ಕೆಂದು ದತ್ತಿಯನ್ನು ನೀಡಿದ್ದಾರೆ. ಶ್ರೀ ಮಠದ ಮಠಾಧೀಶರು ಬ್ರಹ್ಮಚಾರಿಗಳಾಗಿದ್ದು ಶಾಸ್ತ್ರದಲ್ಲಿ ಪ್ರಾವೀಣ್ಯತೆಯನ್ನು ಹೊಂದಿರಬೇಕು. ಚಾರಿತ್ರ್ಯವಂತರಾಗಿದ್ದು ತ್ರಿಕುಳ ಗುಣಗಳನ್ನು ಪಡೆದಿರಬೇಕು. ಬ್ರಹ್ಮಚರ್ಯ ಮಠಾಧೀಶರು ಪಾಲಿಸಿಕೊಂಡು ಬರಬೇಕಾದ ನಿಯಮವಾಗಿದೆ. ಅಲ್ಲದೆ ಈ ದಾನ ಪದ್ಧತಿಯು ಸೂರ್ಯ, ಚಂದ್ರರು ಇರುವವರೆಗೂ, ಹಾಗೇ ಮುಂದುವರಿಯಬೇಕು. ಅದರ ಪಾಲನೆಗಾಗಿ ಬಳಂಜು ಧರ್ಮೀಯರು, ನಕರರು, ಐನೂರ್ವರು, ಕಾಜಗಾರ ಸೆಟ್ಟಿಯರ ಹೆಸರುಗಳಿರುವುದು ಶಾಸನದಿಂದ ತಿಳಿಯುತ್ತದೆ.

| (ಪ್ರಾಚೀನ ಅಳತೆ | | | | ಪ್ರಸ್ತುತ ಅಳತೆ |
|---|---|---|---|---|
| ೪ ಗಿದ್ದ | = | ೧ ಸೊಲಗೆ | : | ೧ ಶೇರು |
| ೪ ಸೊಲಗೆ | = | ೧ ಮಾನ | : | ೪ ಶೇರು |
| ೪ ಮಾನ | = | ೧ ಬಳ್ಳ | : | ೧ ಗಡಿಗೆ |
| ೪ ಬಳ್ಳ | = | ೧ ಕೊಳಗ | : | ೧ ಚೀಲ |
| ೨೦ ಕೊಳಗ | = | ೧ ಖಂಡಗ | : | ೨೦ ಚೀಲ |
| ೪ ಕಾಣಿ | = | ೧ ವೀಸಾ)[೪೨] | | |

**೨. ಶಾಸನಗಳು ೨**

ಶಾಸನ ಸ್ಥಳ : ಸಗರ.

ಶಾಸನ ನಿವೇಶನ : ಗಾಣಿಗರ ಬಾವಿಯ ಗೋಡೆಗೆ ಅಂಟಿಸಲಾಗಿದೆ.

ಕಾಲ : ಶಾಲಿವಾಹನ ಶಕೆ ೧೧೨೧ (ಕ್ರಿ.ಶ.೧೧೯೯).

ಭಾಷೆ/ಲಿಪಿ : ಕನ್ನಡ.

**ಸಾರಾಂಶ**

ಇದೊಂದು ದಾನ ಶಾಸನವಾಗಿದೆ. ಈ ಶಾಸನದಲ್ಲಿ ಯಾವುದೇ ವ್ಯಕ್ತಿ ಅಥವಾ ಅರಸರ ಹೆಸರನ್ನು ಉಲ್ಲೇಖಿಸಿಲ್ಲ. ಸದ್ಯ ಈ ಶಾಸನವನ್ನು ಗ್ರಾಮದ ಗಾಣಿಗರ ಬಾವಿಯಲ್ಲಿ ಕಟ್ಟುಕಲ್ಲನಾಗಿ ಬಳಸಿದ್ದಾರೆ. ಇದರಿಂದಾಗಿ ಶಾಸನಕ್ಕೆ ಯಾವುದೇ ಧಕ್ಕೆಯಾಗಿಲ್ಲ, ಗಣೇಶನ

ಸ್ತುತಿಯೊಂದಿಗೆ ಶೈವ ಶ್ಲೋಕವನ್ನು ಶಾಸನದ ಪ್ರಾರಂಭದಲ್ಲಿ ಕಾಣಬಹುದು.

ಶಾಲಿವಾಹನ ಶಕೆ ೧೧೨೧ನೆಯ (ಕ್ರಿ.ಶ.೧೧೯೯) ಸಿದ್ಧಾರ್ಥಿನಾಮ ಸಂವತ್ಸರ ಜ್ಯೇಷ್ಠ ಶುದ್ಧ ಗುರುವಾರದಂದು '**ಪಟ್ಟಣರಾಯ**' ವರ್ತಕರ ಗುಂಪಿನ ಮುಖ್ಯಸ್ಥನ "**ಆಳು**" (ಸೇವಕ) ಬಾವಿಯನ್ನು ಕಟ್ಟಿಸಿದ್ದರ ನೆನಪಿಗಾಗಿ ಹಾಕಿಸಿದ ಶಾಸನವಾಗಿದೆ. ಈ ಬಾವಿಯು ಸೂರ್ಯ ಚಂದ್ರರಿರುವವರೆಗೂ ಶಾಶ್ವತವಾಗಿರಲೆಂದು ತನ್ನ ಮಾಲೀಕನ (ಪಟ್ಟಣರಾಯನ) ಪಾದಕೆ ಎರಗಿ ಹೇಳುತ್ತಾನೆ.

'ಈ ಶಾಸನವು ಸೆಟ್ಟಿಗರ ಗುಂಪಿನ ಸೇವಕನು ಹಾಕಿಸಿದ ಶಾಸನವಾಗಿದೆ.'

**೩. ಸಿರವಾಳದ ಶಾಸನಗಳು ೧**

| | | |
|---|---|---|
| ಶಾಸನ ನಿವೇಶನ | : | ಶ್ರೀ ಕದಂಬೇಶ್ವರ ದೇವಾಲಯದ ಒಳಗೊಡೆಯ ಕಂಬದ ಮೇಲೆ |
| ರಾಜವಂಶ | : | ಕಲ್ಯಾಣ ಚಾಲುಕ್ಯ. |
| ಅರಸ/ಮಾಂಡಳಿಕರು | : | 'ಭೂಲೋಕಮಲ್ಲ' |
| ಕಾಲ | : | ೧೨ನೇ ವರ್ಷ (ಕ್ರಿ.ಶ.೧೧೩೮ರಲ್ಲಿ). |
| ಧರ್ಮ | : | ಶೈವ(ಈ ಶಾಸನವು ಗುಲಬರ್ಗಾ ವಸ್ತು ಸಂಗ್ರಹಾಲಯದಲ್ಲಿದೆ). |

**ಸಾರಾಂಶ :**

ಕದಂಬೇಶ್ವರ ದೇವಾಲಯದ ಒಳಗೋಡೆಯ ಕಂಬದ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ.

ಕಲ್ಯಾಣ ಚಾಲುಕ್ಯರ ದೊರೆಯಾದ '**ಭೂಲೋಕಮಲ್ಲ**'ನ ಆಳ್ವಿಕೆಯ ೧೨ನೇ ವರ್ಷದಲ್ಲಿ ಈ ಶಾಸನವನ್ನು ಹಾಕಿಸಿದ್ದಾನೆ. ಪ್ರಸ್ತುತ ಶಾಸನವು ಭೂಲೋಕಮಲ್ಲನ ಬಿರುದುಗಳನ್ನು, ಆತನ ಮಹಾಮಾಂಡಳಿಕರ ಹೆಸರುಗಳನ್ನು, ವರ್ತಕರನ್ನು ವರ್ಣಿಸುತ್ತದೆ. ಅಲ್ಲದೆ ಕದಂಬೇಶ್ವರ ದೇವಾಲಯಕ್ಕೆ ನೀಡಿದ ದಾನವನ್ನು ವಿವರಿಸುತ್ತದೆ. ಮಹಾಮಾಂಡಳಿಕನಾದ '**ಸೋವಿದೇವರಸ**' ಆತನ ತಾಯಿ '**ಲೋಕಾದೇವಿ**' ಸಗರ ೫೦೦ ಬಾಡದ ಹೆರ್ಗ್ಗಡೆ ದಂಡನಾಯಕ '**ಅಲ್ಲಮಲಿಯರಸ**', ಸಿರವೊಳಲ ಪ್ರಭು, ನಾಲ್ವರು ಸೆಟ್ಟಿಯ ಬಣದವರು, ತಳಜ ಬಣಜಿಗರು, ಸಮಸ್ತ ಪ್ರಜೆಗಳು ಸೇರಿ ಭೂಲೋಕಮಲ್ಲನ ಆಳ್ವಿಕೆಯ ೧೨ನೇ ವರ್ಷದಲ್ಲಿ ಪಿಂಗಳ ಸಂವತ್ಸರದ ಕಾರ್ತಿಕದ ಅಮವಾಸ್ಯೆಯ ಸೋಮವಾರ ಸೂರ್ಯಗ್ರಹಣದಂದು ಕದಂಬೇಶ್ವರ ದೇವರ ದೇವಾಲಯಕ್ಕೆ ಜೀರ್ಣೋದ್ಧಾರ, ಪೂಜೆ, ನೈವೇದ್ಯ, ಧೂಪ, ದೀಪ, ಚೈತ್ರ, ಪವಿತ್ರಗಳ

ಕಾರ್ಯಕ್ಕಾಗಿ ಪೂಜಾರಿ 'ಗ್ರಾಸ'ನಿಗೆ "೩೨ ಗೇಣ ಅಳತೆಯಲ್ಲಿ ಅಳೆದು ಬಿಟ್ಟ ಆರು ಮತ್ತರು ಮಸಬು ಭೂಮಿ"ಯನ್ನು ದಾನವಾಗಿ ನೀಡಿದರು ಎಂಬುದನ್ನು ತಿಳಿಸುತ್ತದೆ.

ಇದರ ಪಾಲನೆಯನ್ನು ನಾಲ್ವರು ಸೆಟ್ಟಿಯರು, ಸಮಸ್ತ ನಾಗರಿಕರು ನಡೆಸಬೇಕೆಂದು ಶಾಸನ ತಿಳಿಸುತ್ತದೆ. ಈ ಕಾರ್ಯವನ್ನು ನಡೆಸದೆ ಹಾಗೆ ಉಳಿದರೆ ಪೂಜಾರಿಯ ಬದಲು ಬೇರೆಯ ಪೂಜಾರಿಯನ್ನು ನೋಡಿಕೊಳ್ಳಬಹುದು. ಶಾಸನದ ಕೊನೆಯಲ್ಲಿ ಶಾಪಾಶಯವನ್ನು ಒಳಗೊಂಡಿದೆ.

**೪. ಶಾಸನಗಳು ೨**

| | | |
|---|---|---|
| ಗ್ರಾಮ | : | ಸಿರವಾಳ |
| ಶಾಸನ ನಿವೇಶನ | : | ಶ್ರೀ ಸಿದ್ಧಲಿಂಗೇಶ್ವರ ದೇವಾಲಯದ ದಕ್ಷಿಣ ರಂಗ ಮಂಟಪ |
| ರಾಜವಂಶ | : | ಸೇವುಣರು |
| ಅರಸ/ಮಾಂಡಳಿಕರು | : | ಭಿಲ್ಲಮ ದೇವ |
| ಕಾಲ | : | ಶಕವರುಷ ೧೧೧೦ (ಕ್ರಿ.ಶ.೧೧೮೮). |
| ಭಾಷೆ/ಲಿಪಿ | : | ಕನ್ನಡ. |
| ಧರ್ಮ | : | ಶೈವ. |

**ಸಾರಾಂಶ**

ಸಿರವಾಳ ಸಿದ್ಧಲಿಂಗೇಶ್ವರ ದೇವಾಲಯದ ದಕ್ಷಿಣ ರಂಗಮಂಟಪದಲ್ಲಿ ಈ ಶಾಸನವನ್ನು ಇರಿಸಲಾಗಿದೆ. ಸದ್ಯ ಶಾಸನವು ಎರಡು ತುಂಡಾಗಿದ್ದು ಮೇಲಿನ ಭಾಗ ಕಾಣಿಸುವುದಿಲ್ಲ.

ಸೇವುಣರ ದೊರೆಯಾದ **ಭಿಲ್ಲಮ ದೇವನ** ಆಳ್ವಿಕೆಯಲ್ಲಿ ಮಹಾಮಾಂಡಳಿಕರಾಗಿದ್ದ ಎಳಮೇಲ ೩೦೦ರ 'ಸಿಂಗಿದೇವ' ಆತನ ತಾಯಿ 'ನಾಗಲಾದೇವಿ' ಸೇನಾಧಿಪತಿ ಪ್ರತಾಪರಣಂ ಭೈರವ ಘಟ್ಟಿಯ ಕೇತಯನಾಯಕ, ಭಿಲ್ಲಮನ ಮಹಾನಾಯಕ ಅಧಿಕಾರಿ ಪಯ್ಯನಾಯಕ ಮುಂತಾದ ಹೆಸರುಗಳನ್ನು ಪ್ರಸ್ತುತ ಶಾಸನ ಒಳಗೊಂಡಿದೆ.

ಶಕವರುಷ ೧೧೧೦ನೆಯ (ಕ್ರಿ.ಶ.೧೧೮೮) ಪ್ಲವಂಗ ಸಂವತ್ಸರದ ಭಾದ್ರಪದ ಬಹುಳದ ಅಮವಾಸ್ಯೆಯ ಶುಕ್ರವಾರ ಸೂರ್ಯಗ್ರಹಣದ ನಿಮಿತ್ಯ "ಎಳಮೇಲ ೩೦೦ರ ಬಳಿಯ ಬಾಡ ಮುರುವಡಿಯ ಮನ್ನೆಯ ಮೇಲಾಳಿಕೆಯನ್ನು, ಸೀಮೆಯ ನಿಧಿ, ನಿಧಾನ, ನಿಕ್ಷೇಪಗಳು, ಜಲಪಾಷಾಣ, ವೃಕ್ಷ, ಗುಲುಮ, ಕಲ್ಲಕಣಿ, ದಂಡದೋಷ ಕಾಣಿಕೆ, ಇತರ ಆದಾಯಗಳು ಸಿರವಾಳದ ಸಿದ್ಧ ಸಾತೇಶ್ವರ ದೇವರ 'ಅಂಗಬೋಗ-ರಂಗಬೋಗ' ಮತ್ತು ಜೀರ್ಣೋದ್ಧಾರಕ್ಕೆ"

ನೀಡಿದ ದಾನವನ್ನು ವಿವರಿಸುತ್ತದೆ.

**ಅಂಗಭೋಗ** :- ದೇವರ ಪ್ರತೀಕವಾಗಿರುವ ವಿಗ್ರಹಕ್ಕೆ ನೇರವಾಗಿ ಸಲ್ಲುವ ಪೂಜೆ ಯಜ್ಞ, ಪವಿತ್ರ ಭೂಷಣ, ಗಂಧ, ಅಕ್ಷತೆ, ಧೂಪ, ದೀಪ, ನೈವೇದ್ಯ, ನಿರಾಜಕ ಮುಂತಾದವುಗಳ ಮೂಲಕ ಸಲ್ಲುವ ಪೂಜೆ ಇದಾಗಿದೆ.

**ರಂಗಭೋಗ** :- ಪುರಾಣ ಪಠಣ, ಹಾಡುಗಾರಿಕೆ, ವಾದ್ಯ ಸಂಗಿತ, ನೃತ್ಯ ಸೇವೆಗಳು, ರಂಗಭೋಗದಲ್ಲಿ ಸೇರುತ್ತವೆ. ಇವುಗಳು ದೇವರ ಎದುರಿಗೆ ನವರಂಗದಲ್ಲಿ ಅರ್ಪಿತವಾಗುತ್ತವೆ.[೪೩] ಇದಲ್ಲದೆ ಈ ಶಾಸನದಲ್ಲಿ ಸಿದ್ಧ ರೇವಣ, ರೇವಣ ದೇವಯ್ಯ ಎಂಬ ಹೆಸರುಗಳ ಉಲ್ಲೇಖವಿದ್ದು, ಇವರಿಗೆ ಸರ್ವಜ್ಞ ಮೂರ್ತಿ, ಜಗದೊಳಗೊಬ್ಬನೆ ಶಿವಸಿದ್ಧ ಚಕ್ರಿ ಎಂಬುದನ್ನು ವರ್ಣಿಸಿದೆ. ಇತನು ತನ್ನ ಜ್ಞಾನಶಕ್ತಿಯಿಂದ ತುಂಬಿ ಬೋರ್ಗರೆವ ಹೊಳೆಯನ್ನು ಈಜಿ ದಾಟುವ ಶಕ್ತಿಯನ್ನು ಪಡೆದ್ದಿದ್ದನು.

ಈ ಮೇಲಿನ ಅಂಶದ ಆಧಾರವಾಗಿ ಈ ಇಬ್ಬರು ಒಂದೇ ಅಥವಾ ಬೇರೆ ಎಂಬ ವಿಷಯವು ಶಾಸನದಿಂದ ತಿಳಿಯುವುದಿಲ್ಲ. ಸಿರವಾಳವು ಪ್ರಾಚೀನದಿಂದಲೂ ಶೈವ ಕೇಂದ್ರವಾಗಿತ್ತು ಎಂದು ತಿಳಿಯುತ್ತದೆ.

**೫. ಅಣಬಿ ಶಾಸನ**

| | |
|---|---|
| ಶಾಸನ ನಿವೇಶನ : | ಗ್ರಾಮದ ಮಧ್ಯದಲ್ಲಿರುವ 'ಕುಂಬಾರ ಶಾಲೆ' |
| ರಾಜವಂಶ : | ಕಲ್ಯಾಣ ಚಾಲುಕ್ಯ/ಶ್ರೀಮನ್ಮಹಾವಡಿಯ |
| ಅರಸ/ಮಾಂಡಳಿಕರು : | ಜಯಸಿಂಹನ/ಮಧುಸೂದಯ್ಯ ನಾಯಕ. |
| ಕಾಲ : | ಶಕ ವರುಷ ೯೫೫ (ಕ್ರಿ.ಶ.೧೦೩೩). |
| ಭಾಷೆ/ಲಿಪಿ : | ಕನ್ನಡ. |
| ಧರ್ಮ : | ಶೈವ. |

**ಸಾರಾಂಶ**

ಅಣಬಿ ಗ್ರಾಮದ ಮಧ್ಯದಲ್ಲಿರುವ '**ಕುಂಬಾರ ಶಾಲೆಯ**' ಮುಂದೆ ಈ ಶಾಸನವನ್ನು ಕಾಣಬಹುದು.

ಚಾಲುಕ್ಯ ದೊರೆಯಾದ ಜಯಸಿಂಹನ ಅಧಿಕಾರಾವಧಿಯಲ್ಲಿ ಈ ಶಾಸನ ರಚನೆಗೊಂಡಿದೆ. ಕಪ್ಪು ಶಿಲೆಯಲ್ಲಿ ರಚನೆಗೊಂಡ ಪ್ರಸ್ತುತ ಶಾಸನದಲ್ಲಿ ಜಯಸಿಂಹನು 'ಜಗದೇಕಮಲ್ಲ' ಎಂಬ ಬಿರುದಿನೊಂದಿಗೆ '**ಪೊಟ್ಟಳಕೆರೆ**' ಪ್ರದೇಶದಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದನು. ಈತನ ಸಾಮಂತರಾದ ಶ್ರೀಮನ್ಮಹಾವಡಿಯ 'ಮಧುಸೂದಯ್ಯ ನಾಯಕ'ನು

**'ಕಲಿಕಾ ಕರ್ಣ'** ಎಂಬ ಬಿರುದನ್ನು ಹೊಂದಿದ್ದನು.

ಶಕ ವರುಷ ೯೩೩ನೆಯ (ಕ್ರಿ.ಶ.೧೦೩೩) ಶ್ರೀಮುಖನಾಮ ಸಂವತ್ಸರದ ಉತ್ತರಾಯಣದಂದು 'ಅಳಂಬೆಯ' (ಅಣಬಿ) ಅಗ್ರಹಾರದ ಕೂಡಲ ಶ್ರೀ ಮಲ್ಲಿಕಾರ್ಜುನ ದೇವರಿಗೆ "ಹೊಳೆಯ ಉತ್ತರಕ್ಕೆ ೨೮ ಮತ್ತರು ಮತ್ತು ಗೇಣಸಿಂಗ ಗರುಡನ ಗೆಳೆಯಲ್ಲಿ ೩೦ ಮತ್ತರು ಭೂಮಿ"ಯನ್ನು ದೇವಾಲಯಕ್ಕೆ ದಾನವಾಗಿ ನೀಡಿದ ವಿಷಯವನ್ನು ತಿಳಿಸುತ್ತದೆ.

**೬. ದೋರನಹಳ್ಳಿ ಶಾಸನ**

| | | |
|---|---|---|
| ಶಾಸನ ನಿವೇಶನ | : | ಶ್ರೀ ಕಲ್ಲಿನಾಥ ದೇವಾಲಯದ ಆವರಣದಲ್ಲಿ. |
| ರಾಜವಂಶ | : | ಕಲ್ಯಾಣ ಚಾಲುಕ್ಯ. |
| ಅರಸ | : | ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ. |
| ಕಾಲ | : | ಶಕವರುಷ ೯೩೯ (ಕ್ರಿ.ಶ.೧೦೧೭ರಲ್ಲಿ). |
| ಭಾಷೆ/ಲಿಪಿ | : | ಕನ್ನಡ. |
| ಧರ್ಮ | : | ಶೈವ. |

**ಸಾರಾಂಶ :**

ದೋರನಹಳ್ಳಿಯ ಕಲ್ಲಿನಾಥ ದೇವಾಲಯದ ಆವರಣದಲ್ಲಿರುವ ಈ ಶಾಸನವನ್ನು ಕಂಬದ ಮೇಲೆ ಕೆತ್ತಲಾಗಿದೆ. ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನ ಆಳ್ವಿಕೆಯ ಸಂದರ್ಭದಲ್ಲಿ ಶಕವರುಷ ೯೩೯ರ (ಕ್ರಿ.ಶ.೧೦೧೭ರಲ್ಲಿ) ಪಿಂಗಳ ಸಂವತ್ಸರ ಉತ್ತರಾಯಣದ ಸಂಕ್ರಾಂತಿಯ ಆದಿತ್ಯವಾರದ ಸೂರ್ಯಗ್ರಹಣದಂದು **ಶ್ರೀಮನ್ನೀಲ ಶಿವಭಟ್ಟಾರಕರಿಗೆ** "ಸಗರನಾಡ ಬಳಿಯ ದೋರನಹಳ್ಳಿಯಲ್ಲಿ ೧೦೦೦ ಮತ್ತರು ಭೂಮಿ"ಯನ್ನು ದಾನವಾಗಿ ಕೊಡಲಾಯಿತು ಎಂದು ಸದರಿ ಶಾಸನದಿಂದ ತಿಳಿಯುತ್ತದೆ.

ಶ್ರೀಮನ್ನೀಲ ಶಿವಭಟ್ಟಾರಕರು ಯಮ, ನಿಯಮ, ಸ್ವಅಧ್ಯಯನ, ಧಾನ, ಧಾರುಣ, ಮೌನ, ಅನುಷ್ಠಾನ, ಪರಾಯಣ, ಸಮಾಧಿಗಳಿಂದ ಸಂಪನ್ನರಾದ ಪಂಡಿತರಾಗಿದ್ದರು. ಇದೇ ಶಾಸನದ ಇನ್ನೊಂದು ಬದಿಯಲ್ಲಿ ಹೊರೆಯಲು ಕಾಸಿಗ ದುಗ್ಗೋಜನ ಮಗ **ವೋಜನಿಗೆ** ೧೦ ಪತ್ತು ನಿವೇಶನವನ್ನು ನೀಡಿದ ವಿಷಯವನ್ನು ವಿವರಿಸುತ್ತದೆ.

**೭. ಭೀಮರಾಯನಗುಡಿ ಶಾಸನ**

| | | |
|---|---|---|
| ಶಾಸನ ಸ್ಥಳ | : | ಭೀಮರಾಯನಗುಡಿ(ಅಮಲಾಪುರ). |
| ಶಾಸನ ನಿವೇಶನ | : | ದೇವಾಲಯದ ಪ್ರವೇಶ ದ್ವಾರದ ಎಡಗಡೆ ಕೆಳಭಾಗದಲ್ಲಿ. |
| ರಾಜವಂಶ | : | ಕಲ್ಯಾಣ ಚಾಲುಕ್ಯ./ಸಗರ ೩೦೦ |

ಅರಸ/ಮಾಂಡಳಿಕರು : ತ್ರೈಲೋಕಮಲ್ಲ ಒಂದನೇ ಸೋಮೇಶ್ವರ/ರೇವರಸ

ಕಾಲ : ಶಕ ವರುಷ ೯೭೩ (ಕ್ರಿ.ಶ.೧೦೫೧).

ಭಾಷೆ/ಲಿಪಿ : ಕನ್ನಡ.

ಧರ್ಮ : ವೈಷ್ಣವ.

**ಸಾರಾಂಶ**

ಬಲಭೀಮೇಶ್ವರ ದೇವಾಲಯದ ಪ್ರವೇಶ ದ್ವಾರದ ಎಡಗಡೆಯ ಕೆಳಭಾಗದಲ್ಲಿ ಈ ಶಾಸನವನ್ನು ಇಡಲಾಗಿದೆ ಅಥವಾ ಕಲ್ಲಿನೊಂದಿಗೆ ಶಾಸನಸಹಿತ ಕಟ್ಟಲಾಗಿದೆ. ಈ ಶಾಸನವು ಸುಮಾರು ೨೯ ಸಾಲಿನಿಂದ ಕೂಡಿದೆ. ಸದ್ಯ ದೇವಾಲಯದ ಜೀರ್ಣೋದ್ಧಾರದ ಸಂದರ್ಭದಲ್ಲಿ ಕಾರ್ಮಿಕರು ಪ್ಲಾಸ್ಟರ್ ಮಾಡುವಾಗ ಶಾಸನದ ಮೇಲೆ ಸಿಮೆಂಟ್ ಸೇರಿರುವುದರಿಂದ ಲಿಪಿಯನ್ನು ಗುರುತಿಸದಷ್ಟು ಹಾಳಾಗಿದೆ.

ಈ ಶಾಸನವು ಕಲ್ಯಾಣ ಚಾಲುಕ್ಯರ ದೊರೆಯಾದ ತ್ರೈಲೋಕಮಲ್ಲನ ಆಳ್ವಿಕೆಯ ವಿಚಾರವನ್ನು ತಿಳಿಸುತ್ತದೆ. ಅಲ್ಲದೆ ಸಗರ ೩೦೦ ನಾಡನ್ನು ಮತ್ತು ಮಹಾಮಾಂಡಳಿಕ ರೇವರಸನನ್ನು ಹೆಸರಿಸುತ್ತದೆ. ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿಯಾದ ಒಂದನೇ ಸೋಮೇಶ್ವರನ ಬಿರುದುಗಳನ್ನು ಈ ಶಾಸನ ವಿವರಿಸಿದೆ.

ಶಕ ವರುಷ ೯೭೩ನೆಯ (ಕ್ರಿ.ಶ.೧೦೫೧) ನಂದನ ಸಂವತ್ಸರ ಉತ್ತರಾಯಣ ಸಂಕ್ರಾಂತಿ ಆದಿತ್ಯವಾರದಂದು ಸಗರ ೩೦೦ರ ಮಹಾಮಂಡಳಿಕ ರೇವರಸ "ಸೋಮೇಶ್ವರ ದೇವರಿಗೆ ೩೨ ಗೇಣ ಕೋಲಲು ದಶುವನ್ದಂ ದಾನ ನೀಡಿದ್ದಾಗಿ ಶಾಸನ ತಿಳಿಸುತ್ತದೆ.

"ಸದ್ಯ ಈಗಿರುವ ಭೀಮರಾಯನಗುಡಿಯ ಬಲಭೀಮೇಶ್ವರ ದೇವಾಲಯಕ್ಕೂ ದೇವಾಲಯದಲ್ಲಿರುವ ಶಾಸನಕ್ಕೂ ಯಾವುದೇ ರೀತಿಯ ಸಂಬಂಧ ಇಲ್ಲವೆಂದು ಈ ಶಾಸನದ ವಿಷಯದಿಂದ ತಿಳಿಯಬಹುದಾಗಿದೆ. ಈಗಿನ ಈ ವಸಹಾತು ಹಿಂದೆ ಅಮಲಾಪುರ ಎಂಬ ಗ್ರಾಮವಾಗಿತ್ತು. ನಂತರ ದಿನಗಳಲ್ಲಿ ಹಾಳುಕೊಂಪೆಯಾಯಿತ್ತು."

**೮. ಗೋಗಿ ಶಾಸನ**

ಶಾಸನ ನಿವೇಶನ : ಗ್ರಾಮದ ಹಳೆಯ ಕಟ್ಟಡದ ಎದುರಿನ ಶಾಲಾ ಆವರಣದಲ್ಲಿ.

ರಾಜವಂಶ : ಕಲ್ಯಾಣ ಚಾಲುಕ್ಯ.

ಅರಸ/ಮಾಂಡಳಿಕರು : 'ತ್ರಿಭುವನ ಮಲ್ಲ'(ಆರನೇ ವಿಕ್ರಮಾದಿತ್ಯ)

ಕಾಲ : ಕಾಲದ ಭಾಗ ಸವೆದು ಹೋಗಿದೆ(ಸರ್ವದಾರಿ ಸಂವತ್ಸರ ಉತ್ತರಾಯಣ).

ಭಾಷೆ/ಲಿಪಿ : ಕನ್ನಡ.

ಧರ್ಮ : ಶೈವ.

**ಸಾರಾಂಶ**

ಗೋಗಿ ಗ್ರಾಮದಲ್ಲಿ ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪವನ್ನು ಹೋಲುವ (ಚಂದಾ ಹುಸೇನಿ ದರ್ಗಾದ ಹತ್ತಿರ) ಹಳೆಯ ಕಟ್ಟಡದ ಎದುರಿನ ಶಾಲಾ ಆವರಣದಲ್ಲಿ ಕಪ್ಪು ಶಿಲೆಯಲ್ಲಿ ರಚಿಸಿರುವ ತುಂಡು ಶಾಸನ ಇದೆ. ಈ ಶಾಸನವು ಅರ್ಧದಷ್ಟು ಭಾಗ ಸವೆದು ಹೋಗಿದೆ.

ಕಲ್ಯಾಣ ಚಾಲುಕ್ಯರ ಶ್ರೇಷ್ಠ ದೊರೆಯಾದ '**ತ್ರಿಭುವನ ಮಲ್ಲ**'ನ (**ಆರನೇ ವಿಕ್ರಮಾದಿತ್ಯ**) ಕಾಲದ ಶಾಸನವಾಗಿದೆ. ಈ ಶಾಸನದಲ್ಲಿ ದಂಡನಾಯಕ **ದುಗ್ಗರಸ** ಮತ್ತು **ಪೆರ್ಗಡೆ ನಾಯಕ** ಹಾಗೂ ಮಹಾಮಾಂಡಳಿಕ **ರೇವರಸ, ಆನೆಮರಸರ**[೪೪] ಉಲ್ಲೇಖವಿದೆ.

"ಸರ್ವಧಾರಿ ಸಂವತ್ಸರ ಉತ್ತರಾಯಣ ಸಂದರ್ಭದಲ್ಲಿ ದೇವಾಲಯಕ್ಕೆ ಹಿರಿಯ ಕೋಲಲ್ಲಿ ಬಿಟ್ಟ ನಿವೇಶನ ಮತ್ತು ಒಂದು ತೋಟವನ್ನು ದಾನವಾಗಿ ನೀಡಲಾಯಿತ್ತು." ಎಂದು ವರ್ಣಿಸುತ್ತದೆ. ಶಾಸನದ ಕೊನೆಯಲ್ಲಿ ಶಾಪಾಶಯದ ವಿವರಣೆ ಇದೆ.

'ಶಾಸನದಲ್ಲಿ ಉಲ್ಲೇಖಗೊಂಡಿರುವ ದೇವಾಲಯ ಯಾವುದು ಎಂದು ಶಾಸನದಿಂದ ಸ್ಪಷ್ಟವಾಗಿ ತಿಳಿಯುವುದಿಲ್ಲ. ಶಾಸನಕ್ಕೆ ಸೂಕ್ತ ರಕ್ಷಣೆ ಇಲ್ಲದೆ ಇರುವುದರಿಂದ ಶಾಸನದ ಲಿಪಿಯು ಅಸ್ಪಷ್ಟವಾಗಿ ಗೋಚರವಾಗುತ್ತದೆ. ಇದರಿಂದ ಶಾಸನದ ವಿಷಯವನ್ನು ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗಿಲ್ಲ. ಸದ್ಯ ಗೋಗಿ ಗ್ರಾಮದ ಈ ಶಾಸನವಿದ ಸ್ಥಳದಲ್ಲಿ ದೇವಾಲಯದ ಅವಶೇಷಗಳು ಮಾತ್ರ ನಮಗೆ ಲಭ್ಯವಿವೆ.'

**೯. ಹಾರಣಗೇರಾ ಶಾಸನಗಳು ೧**

ಶಾಸನ ನಿವೇಶನ : ಹಾರಣಗೇರಾ ಗ್ರಾಮದ ಹರಿಜನ ವಾಡ.

ರಾಜವಂಶ : ಕಲ್ಯಾಣ ಚಾಲುಕ್ಯರು(ಲಿಪಿಯ).

ಅರಸ/ಮಾಂಡಳಿಕರು : ಉಲ್ಲೇಖವಿಲ್ಲ.

ಭಾಷೆ/ಲಿಪಿ : ಕನ್ನಡ.

ಧರ್ಮ : ಶೈವ.

**ಸಾರಾಂಶ**

ಹಾರಣಗೇರಾ ಗ್ರಾಮದ ಹರಿಜನ ವಾಡದಲ್ಲಿ ಈ ಶಾಸನವನ್ನು ಕಂಡುಬರುತ್ತದೆ. ಇದೊಂದು ಸ್ತಂಭ ಶಾಸನವಾಗಿದ್ದು, ಸ್ತಂಭದ ಮೂರು ಬದಿಗಳಲ್ಲಿ ಲಿಪಿಯನ್ನು

ಮೂಡಿಸಲಾಗಿದ್ದು, ಅವುಗಳ ಲಿಪಿಗಳ ಆಧಾರವಾಗಿ ಸ್ತಂಭದ ಬದಿಗಳಲ್ಲಿ ಲಿಪಿಗಳು ಬೇರೆ ಬೇರೆ ಕಾಲಾವಧಿಯಲ್ಲಿ ರಚನೆಯಾಗಿವೆ ಎಂದು ಹೇಳಬಹುದು. ಈ ಕೆತ್ತನೆಯು ಕಲ್ಯಾಣ ಚಾಲುಕ್ಯರ ಲಿಪಿಯನ್ನು ಹೋಲುತ್ತದೆ ಇದು ಚಾಲುಕ್ಯರ ಶಾಸನವೆಂದು ಹೇಳಬಹುದು. ಶಾಸನದಲ್ಲಿ ಲಿಪಿಯು ಗುರುತಿಸದಷ್ಟು ತ್ರುಟಿತಗೊಂಡಿದೆ. ಸ್ತಂಭದ ಮೂರನೇ ಭಾಗವು ಒಡೆದು ಹೋಗಿದೆ.

ಈ ಗ್ರಾಮವು ಪ್ರಮುಖ ವಿದ್ಯಾಕೇಂದ್ರವಾಗಿತ್ತು ಎಂದು ಶಾಸನದಲ್ಲಿ ಉಲ್ಲೇಖಗೊಂಡಿರುವ ವಿಷಯದಿಂದ ತಿಳಿಯುತ್ತದೆ. ಮತ್ತರು ೧೦೦, ಗೋಯಿಂದಮಗೆರೆ, ಗದ್ದೆ, ಕಂಮ್ಮ ೪೫೦, ಬಾವಿಯ ತೋಂಟ, ಶಾಲೆಯ ಸುತ್ತುಂ ೪೫ ಎಂಬ ಇತ್ಯಾದಿ ವಿಷಯಗಳ ಸಹಾಯದಿಂದ ವಿದ್ಯಾಕೇಂದ್ರಕ್ಕೆ ದಾನ ಕೊಟ್ಟಿರುವುದನ್ನು ತಿಳಿಯಬಹುದು. ಇನ್ನೊಂದು ಬದಿಯಲ್ಲಿ ಶಾಸನದಲ್ಲಿ ಪಂಡಿತರಿಗೆ ದತ್ತಿ ನೀಡಿದ ವಿವರಣೆ ಇದೆ.

**೧೦. ಶಾಸನಗಳು ೨**

| | | |
|---|---|---|
| ಶಾಸನ ಸ್ಥಳ | : | ಹಾರಣಗೇರಾ. |
| ಶಾಸನ ನಿವೇಶನ | : | ಭೀಮರಾಯ ಪೂಜಾರಿಯವರ ಮನೆಯಂಗಳದಲ್ಲಿ. |
| ರಾಜವಂಶ | : | ಉಲ್ಲೇಖವಿಲ್ಲ. |
| ಅರಸ/ಮಾಂಡಳಿಕರು | : | ಉಲ್ಲೇಖವಿಲ್ಲ. |
| ಕಾಲ | : | ಒಡೆದ ಶಾಸನವಿದ್ದು ಶಾಸನದ ಕೊನೆಯ ಭಾಗವಾಗಿದೆ. |

**ಸಾರಾಂಶ**

ಭೀಮರಾಯ ಪೂಜಾರಿಯವರ ಮನೆಯಂಗಳದಲ್ಲಿ ಒಡೆದ ಶಾಸನವು ನಮಗೆ ಲಭ್ಯವಿದ್ದು, ಅದು ದಾನ ಶಾಸನದ ಕೊನೆಯ ಭಾಗವಾಗಿದ್ದು "ತೆರಿಗೆ ರಹಿತವಾಗಿ ೩೦ ಮತ್ತರು ಭೂಮಿಯನ್ನು ನೀಡಿದ ವಿವರಣೆಯನ್ನು ತಿಳಿಸುತ್ತದೆ.

**೧೧. ಮದ್ರಿಕಿ ಶಾಸನಗಳು ೧**

| | | |
|---|---|---|
| ಶಾಸನ ನಿವೇಶನ | : | ಹಸನ್ ಪಟೇಲರ 'ದಮ್ಮೇತಿ ತೋಟ'ದಲ್ಲಿ. |
| ರಾಜವಂಶ | : | ಕಲ್ಯಾಣ ಚಾಲುಕ್ಯ. |
| ಅರಸ/ಮಾಂಡಳಿಕರು | : | ಜಗದೇಕಮಲ್ಲ/ಮಹಾಮಾಂಡಳಿಕ ರೇವರಸ. |
| ಕಾಲ | : | ಶಕ ವರುಷ ೯೪೯ (ಕ್ರಿ.ಶ.೧೦೨೭). |
| ಭಾಷೆ/ಲಿಪಿ | : | ಕನ್ನಡ. |
| ಧರ್ಮ | : | ಶೈವ. |

**ಸಾರಾಂಶ**

ಶಹಾಪುರ ತಾಲೂಕಿನಿಂದ ಮದ್ರಿಕಿ ಗ್ರಾಮವನ್ನು ಪ್ರವೇಶ ಪಡೆಯುವ ಮಾರ್ಗದ ಎಡಭಾಗಕ್ಕೆ ಸ್ವಲ್ಪ ದೂರದಲ್ಲಿ ಹಸನ್ ಪಟೇಲ ಎಂಬುವವರಿಗೆ ಸಂಬಂಧಿಸಿದ ಹೊಲದಲ್ಲಿ ಈ ಶಾಸನವನ್ನು ಕಾಣಬಹುದು. ಈ ಪ್ರದೇಶವನ್ನು '**ದಮ್ಮೇತಿ ತೋಟ**', '**ದರ್ಮೃತಿ ತೋಟ**' ಎಂದು ಕರೆಯುತ್ತಾರೆ. ಈ ಶಾಸನವು ಶೈವ ದೇವಾಲಯದ ಮುಂದೆ ಇದ್ದು, ಅದರ ಪಕ್ಕದಲ್ಲಿಯೇ ಪ್ರಾಚೀನ ಬಾವಿಯು ಇದೆ. ಈ ಶಾಸನವನ್ನು ಚಚ್ಚೌಕಾಕಾರದ ಕಂಬದ ಮೇಲೆ ಮೂರು ಬದಿಗಳಲ್ಲಿ ಕೊರೆಯಲಾಗಿದೆ. ಆದರೆ ಶಾಸನಕ್ಕೆ ಸೂಕ್ತ ರಕ್ಷಣೆ ಇಲ್ಲದ ಕಾರಣ ಅದು ಗುರುತಿಸದಷ್ಟು ಹಾಳಾಗಿದ್ದು, ಕೆಲವು ಭಾಗ ಒಡೆದು ಹೋಗಿದೆ.

ಕಲ್ಯಾಣ ಚಾಲುಕ್ಯ ದೊರೆಯಾದ ಜಗದೇಕಮಲ್ಲನು ಯಾದಗಿರಿ(ಏತಗಿರಿ)ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನು ಎಂದು ಶಾಸನ ವಿವರಿಸುತ್ತದೆ. ಚಾಲುಕ್ಯರ ರಾಜಧಾನಿ ಯಾದಗಿರಿ(ಏತಗಿರಿ)ಯಾಗಿತ್ತು ಎಂದು ತಿಳಿದುಕೊಳ್ಳಲು ಪ್ರಸ್ತುತ ಶಾಸನವು ಪ್ರಮುಖ ಆಧಾರವಾಗಿದೆ. ಜಗದೇಕಮಲ್ಲನ ಮಹಾಮಾಂಡಳಿಕನಾಗಿದ್ದ ರೇವರಸ '**ಮೂವಡಿಗಂಡ ರಿಪುಮಂಡಳಿಕ ಬೇರುಂಡ**' ಎಂಬ ಬಿರುದು ಹೊಂದಿದ್ದನು.

ಶಕ ವರುಷ ೯೪೧ನೆಯ (ಕ್ರಿ.ಶ.೧೦೨೭) ಪ್ರಭವ ಸಂವತ್ಸರದ ಉತ್ತರಾಯಣ ಸಂಕ್ರಾಂತಿಯ ಆದಿತ್ಯವಾರದಂದು ಮಳ್ದರ್ಕೆ(ಮದ್ರಿಕಿ) ಅಗ್ರಹಾರ ಊರೊಡೆಯ **ಸರ್ವದೇವ ಭಟ್ಟಾರು** ಮತ್ತು **ಮಹಾಜನ ಐನೂರ್ವರು** ಸೇರಿ ಹೋಮ, ಯಮ, ನಿಯಮ, ಧ್ಯಾನ, ಮೌನಾನುಷ್ಠಾನ, ಪರಾಯಣದ ಮೂಲಕ 'ನಾಮಗಾವುಂಡನ ಬಾವಿಯನ್ನು ಧರ್ಮಾರ್ಥವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ. ಅಲ್ಲದೆ "ಸಿರವಾಳದ ದಾರಿಯಿಂದ ದಕ್ಷಿಣಕ್ಕೆ, ಪೊನ್ನಂಬಟ್ಟೆಯ ದಾರಿಯಿಂದ ಪೂರ್ವಕ್ಕೆ ಮೂವತ್ತು ಮತ್ತರು ಭೂಮಿಯನ್ನು ಹೂದೋಟ, ವಾಸದ ಮನೆ, ಬಾವಿಯನ್ನು ದಾನವಾಗಿ ನೀಡಿದ್ದರು ಎಂದು ಪ್ರಸ್ತುತ ಶಾಸನ ವಿವರಿಸುತ್ತದೆ.

ಊರೊಡೆಯರು, ಮಹಾಜನ ಐನೂರ್ವರು ಈ ಧರ್ಮವನ್ನು ಮುಂದುವರಿಸಬೇಕು ಎಂದು ಶಾಸನ ತಿಳಿಸುತ್ತದೆ.

"ಶಾಸನದಲ್ಲಿ ತಿಳಿಸಿರುವಂತೆ ಬಾವಿ ಮಾತ್ರ ಇದ್ದು, ಬಾವಿಯ ಸುತ್ತಲೂ ವಾಸದ ಮನೆಯ ಕುರುಹುಗಳನ್ನು ಕಾಣಬಹುದು. ಸದ್ಯ ಇವುಗಳನ್ನು ದನಗಳ ಗ್ವಾದಲಿಗಳಾಗಿ ಉಪಯೋಗಿಸುತ್ತಿದ್ದಾರೆ. ಅಲ್ಲದೆ ಬಾವಿಯು ಶೀಥಿಲಾವಸ್ಥೆಯನ್ನು ತಲುಪಿದೆ."

**೧೨. ಶಾಸನಗಳು ೨**

ಶಾಸನ ನಿವೇಶನ : ಬಸವೇಶ್ವರ ದೇವಾಲಯ.

ರಾಜವಂಶ : ಕಲ್ಯಾಣ ಚಾಲುಕ್ಯ.

ಅರಸ/ಮಾಂಡಳಿಕರು : ಚಕ್ರವರ್ತಿ ತ್ರೈಲೊಕ್ಯಮಲ್ಲ ಒಂದನೇ ಸೋಮೇಶ್ವರ.

ಕಾಲ : ಶಕವರುಷ ೯೭೯ (ಕ್ರಿ.ಶ. ೧೦೫೭).

ಭಾಷೆ/ಲಿಪಿ : ಕನ್ನಡ.

ಧರ್ಮ : ಶೈವ.

**ಸಾರಾಂಶ**

ಮದ್ರಿಕಿ ಗ್ರಾಮದ ಮಧ್ಯದಲ್ಲಿರುವ ಬಸವೇಶ್ವರ ದೇವಾಲಯದ ಮುಂದೆ ಬಲಭಾಗಕ್ಕೆ ಇರುವ ಈಶ್ವರ ದೇವಾಲಯದ ಪ್ರವೇಶ ದ್ವಾರದ ಪೂರ್ವದ ಗೋಡೆಯಲ್ಲಿ ಈ ಶಾಸನ ಕಂಡುಬರುತ್ತದೆ.

ಮೊದಲು ದೇವಾಲಯವು ತ್ರಿಕೂಟ ದೇವಾಲಯವಾಗಿದ್ದು ಆಧುನಿಕತೆಯ ಹೊಡೆತಕ್ಕೆ ಸಿಲುಕಿ ಜಿರ್ಣೋದ್ಧಾರಗೊಂಡು ಆಗ ಇದು ದ್ವಿಕೂಟ ದೇವಾಲಯವಾಗಿ ಮಾರ್ಪಟ್ಟಿರಬೇಕು (ದೇವಾಲಯದ ಎಡಭಾಗದಲ್ಲಿ ಮುಂದೆ ಹನುಮಾನ ಮಂದಿರವು ಇದೆ).

ಚಾಲುಕ್ಯ ಚಕ್ರವರ್ತಿ ತ್ರೈಲೊಕ್ಯಮಲ್ಲ ಒಂದನೇ ಸೋಮೇಶ್ವರನ ಕಾಲದ ಶಾಸನವಾಗಿದೆ. ಶಕವರುಷ ೯೭೯ನೇ (ಕ್ರಿ.ಶ. ೧೦೫೭) ಹೇವಿಳಂಬಿ ಸಂವತ್ಸರ ವೈಶಾಖ ಶುದ್ಧ ತದಿಗೆ ಬೃಹಸ್ಪತಿ ವಾರದಂದು ಲಕ್ಷ್ಮಿಸೆಟ್ಟಿಯು ಇಲ್ಲಿನ ದೇವಾಲಯದ ಛತ್ರಕ್ಕೆ ಭೂಮಿಯನ್ನು ಕೊಟ್ಟನೆಂದು ತಿಳಿಸುತ್ತದೆ.

"ದೇವಾಲಯದ ಜಿರ್ಣೋದ್ಧಾರದ ಸಂದರ್ಭದಲ್ಲಿ ಗೋಡೆಗಳಿಗೆ ಸಿಮೆಂಟ್‌ನಿಂದ ಪ್ಲಾಸ್ಟರ್ ಮಾಡುವಾಗ ಕಾರ್ಮಿಕರು ಗೊಡೆಯಲ್ಲಿದ್ದ ಶಾಸನಕ್ಕೆ ಸಿಮೆಂಟನ್ನು ಸವರಿರುವುದರಿಂದ ಶಾಸನವು ಗುರುತಿಸದಷ್ಟು ಹಾಳಾಗಿ ಹೋಗಿದೆ.

**೧೩. ದೋರನಹಳ್ಳಿ ಪರ್ಶಿಯನ್ ಶಾಸನ**

ಶಾಸನ ಸ್ಥಳ : ದೋರನಹಳ್ಳಿ

ಶಾಸನ ನಿವೇಶನ : ಮಸೀದಿಯ ಮುಂದಿರುವ ಬಾವಿಯ ಗೋಡೆಗೆ ಅಂಟಿಸಲಾಗಿದೆ.

ರಾಜವಂಶ : ಬಿಜಾಪುರ ಆದಿಲ್ ಶಾಹಿ.

ಸುಲ್ತಾನರು : ಅಲಿ ಆದಿಲ್ ಶಾ.

ಕಾಲ : ಹಿ.೯೭೮ (ಕ್ರಿ.ಶ.೧೫೭೦ರಲ್ಲಿ).

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಹಿಜರಿ ೯೭೮ರ (ಕ್ರಿ.ಶ.೧೫೭೦-೭೧) ರಂದು ಅಲಿ ಆದಿಲ್ ಶಾಹನು, 'ಖಾನ್-ಇ-ಆಜಮ್ ಬಿಲಾಲ್' ಎಂಬ ಬಿರುದನ್ನು ಹೊಂದಿದ **ದಿಲಾವರ್ ಖಾನರಿಗೆ** ದೋರನಹಳ್ಳಿ ಸೀಮೆಯಲ್ಲಿ ಎರಡು ಚಾವರ ಭೂಮಿ(ಒಂದು ಮರಳು(ಮಸಬು) ಇನ್ನೊಂದು ಕಪ್ಪು(ಎರೆ) ಭೂಮಿಯನ್ನು) ವಂಶಪಾರಂಪರ್ಯವಾಗಿ ಅನುಭವಿಸಲು ರಾಜನು ದತ್ತಿಯನ್ನು ನೀಡಿದ್ದಾನೆ.[೪೬] ಎಂದು ಶಾಸನ ವಿವರಿಸುತ್ತದೆ.

## ೩.೨ ವೀರಗಲ್ಲುಗಳು

ಮಾನವನ ಹುಟ್ಟು ಅನಿವಾರ್ಯವಾಗದೇ ಇರಬಹುದು. ಆದರೆ ಹುಟ್ಟಿದ ಮೇಲೆ ಮರಣವೆಂಬುದು ಅವನಿಗೆ ಅನಿವಾರ್ಯವೂ, ಪ್ರಕೃತಿನಿಯಮವೂ ಹೌದು.[೪೭]

ಕರ್ನಾಟಕದ ಜನರ ವರ್ಣನೆಯು ತುಂಬಾ ಮಹತ್ವದ್ದಾಗಿದೆ. ಆ ನಾಡವರು, ಸುಭಟರು, ಗುಣವಂತರು, ಕಲಾರಸಿಕರೂ, ವಿವೇಕಿಗಳೂ, ಮೇಲಾಗಿ ಅಷ್ಟೇ ಸ್ವಾಭಿಮಾನಿಗಳು, ಉಗ್ರ ಸ್ವರೂಪಿಗಳು ಆಗಿದ್ದರು ಎಂಬ ಮಾತು ಪ್ರಾಚೀನ ಕರ್ನಾಟಕದ ಜನತೆಯ ಜೀವನ ಮೌಲ್ಯವನ್ನು ಎತ್ತಿ ತೋರಿಸುತ್ತದೆ.[೪೭ಅ]

ಜಿತೇಂನ ಲಭ್ಯತೇ ಲಕ್ಷ್ಮಿ ; ಮೃತೇನಾಷಸುರಾಂಗನಾ
ಕ್ಷಣ ವಿಧ್ವಂಸಿನಿ ಕಾಯೇ ಕಾಚಿಂತಾ ಮರಣೇರಣೇ ॥

ಯುದ್ಧದಲ್ಲಿ ಗೆದ್ದರೆ ಇಹಲೋಕದಲ್ಲಿ ರಾಜ್ಯಲಕ್ಷ್ಮಿಯೂ, ಹೋರಾಡುತ್ತ ಮಡಿದರೆ ಸ್ವರ್ಗದಲ್ಲಿ ಸುರಾಂಗನೆಯರೂ ದೊರಕುವುದರಿಂದ ಕ್ಷಣದಲ್ಲಿ ನಾಶವಾಗುವ ಈ ದೇಹಕ್ಕಾಗಿ ಮರಣ ಇಂತಹ ಮಾನವೀಯ ಮೌಲ್ಯಗಳನ್ನು ಹೊಂದಿದ್ದ ವ್ಯಕ್ತಿಗಳು ಯುದ್ಧದಲ್ಲಿ ಮಡಿದ, ವೀರನ ವೀರತ್ವದ ನೆನಪಿಗಾಗಿ ಹಾಕಿಸುತ್ತಿದ್ದರು. ವೀರನು ಹೋರಾಟದಲ್ಲಿ ಸತ್ತ ನಂತರ ಇಪ್ಪತ್ತು ತಲೆಮಾರುಗಳವರೆಗೂ ಆತನ ಪರಾಕ್ರಮದ ಕೀರ್ತಿ ಶಾಶ್ವತವಾಗಿ ನಿಲ್ಲುವುದೆಂಬ ನಂಬಿಕೆಯಿಂದ ಈ ಶಾಸನಗಳನ್ನು ಹಾಕಿಸುತ್ತಿದ್ದರು. ಆ ಕಾಲದಲ್ಲಿ ಒಬ್ಬ ವ್ಯಕ್ತಿ ಎಷ್ಟೇ ಸಾಧನೆ ಮಾಡಿದರೂ ಪ್ರಸಾರವಾಗುವುದು ತೀರಾ ವಿರಳವಾಗಿತ್ತು. ಆದರೆ ಒಬ್ಬ ವೀರ ಮರಣ ಹೊಂದಿದರೆ ಅಥವಾ ಯುದ್ಧದಲ್ಲಿ ಪ್ರಾಣತ್ಯಾಗವನ್ನು ಮಾಡಿದರೆ ಆತನ ತ್ಯಾಗವನ್ನು ಪ್ರಚಾರ ಪಡಿಸಲಾಗುತಿತ್ತು. ಅಂತಹ ವ್ಯಕ್ತಿಯ ಮೇಲೆ ಕತೆಗಳು ಹುಟ್ಟಿಕೊಳ್ಳುತ್ತಿದ್ದವು.

**ಗ್ರಾಮ : ಸಿರವಾಳ**

ಸಿರವಾಳ ಗ್ರಾಮದಲ್ಲಿ ಮೂರು ವೀರಗಲ್ಲು ಶಾಸನಗಳನ್ನು ಕಾಣಬಹುದು. ಈ ವೀರಗಲ್ಲುಗಳು ಗ್ರಾಮದ ಹೊರ ಹೊಲಯದಲ್ಲಿವೆ.

೧. ವೀರಗಲ್ಲು ೧

ವೀರಗಲ್ಲಿನಲ್ಲಿ ವೀರನೊಬ್ಬನ ಉಬ್ಬುಶಿಲ್ಪ ಕಂಡುಬರುತ್ತದೆ. ಆತನ ಒಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈಯಲ್ಲಿ ರಕ್ಷಣೆಗಾಗಿ ಗುರಾಣಿಯನ್ನು ಹಿಡಿದು ಹೋರಾಟಕ್ಕೆ ಸಿದ್ಧವಾಗಿ ನಿಂತಿರುವ ಭಂಗಿಯಲ್ಲಿನ ಉಬ್ಬು ಶಿಲ್ಪವನ್ನು ಚಿತ್ರಿಸಿರುತ್ತಾರೆ.

೨. ವೀರಗಲ್ಲು ೨

ವೀರಗಲ್ಲಿನಲ್ಲಿ ವೀರನೊಬ್ಬನ ಉಬ್ಬುಶಿಲ್ಪವನ್ನು ಕಾಣಬಹುದು. ವೀರನ ಒಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈಯಲ್ಲಿ ರಕ್ಷಣೆಗಾಗಿ ಗುರಾಣಿಯನ್ನು ಹಿಡಿದು ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದಾನೆ, ಈ ಭಂಗಿಯು ವೀರನು ಹೋರಾಟಕ್ಕೆ ಸಿದ್ಧವಾಗಿ ನಿಂತಿರುವಂತೆ ತೋರುತ್ತದೆ.

೩. ವೀರಗಲ್ಲು ೩

ಈ ವೀರಗಲ್ಲಿನಲ್ಲಿ ವೀರನೊಬ್ಬನು ಅಶ್ವಾರೂಢನಾದ ಉಬ್ಬುಶಿಲ್ಪವಿದ್ದು ವೀರನು ಒಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈಯಲ್ಲಿ ಕುದುರೆಯ ಲಗಾಮನ್ನು ಹಿಡಿದುಕೊಂಡಿದ್ದಾನೆ. ಈ ಭಂಗಿಯು ಆತನು ಹೋರಾಟದಲ್ಲಿ ನಿರತವಾಗಿರುವಂತೆ ಕಂಡುಬರುತ್ತದೆ.

**ಗ್ರಾಮ : ಹುಲ್ಕಲ್ (ಕೆ)**

ಹುಲ್ಕಲ್ (ಕೆ) ಗ್ರಾಮದ ಹಿಂದೆ ಅಂದರೆ ಕೋಡಮನಹಳ್ಳಿಗೆ ಹೋಗುವ ಮಾರ್ಗದ ಮಧ್ಯದಲ್ಲಿ ಹಳ್ಳದ ದಂಡೆಯ ಮೇಲೆ ಎರಡು ವೀರಗಲ್ಲು ಶಾಸನಗಳು ಕಂಡುಬರುತ್ತವೆ. ವೀರನು ಆತ್ಮ ರಕ್ಷಣೆಗಾಗಿ ತಲೆಗೆ ಕವಚವನ್ನು ಧರಿಸಿದ್ದಾನೆ. ವೀರಗಲ್ಲುಗಳು ಗ್ರಾಮದ ಬೇರೆ ಬೇರೆ ಪ್ರದೇಶದಲ್ಲಿದ್ದು ಅವುಗಳನ್ನು ಒಂದೆಡೆ ಇರಿಸಿದ್ದಾರೆ ಎಂದು ಸ್ಥಳೀಯರಿಂದ ತಿಳಿದುಬರುತ್ತದೆ. ಈ ಸ್ಥಳದಲ್ಲಿ ಕ್ರಿ.ಶ.೧೨ನೆಯ ಶತಮಾನದ ೭ ಸಾಲಿನ ಶಾಸನವಿದ್ದು ಅದರಲ್ಲಿಯ ಅಕ್ಷರಗಳು ಅಸ್ಪಷ್ಟವಾಗಿ ಗೋಚರವಾಗುತ್ತವೆ. ಅಲ್ಲದೆ ಈ ಪ್ರದೇಶದಲ್ಲಿ ದೇವಾಲಯದ ಕುರುಹುಗಳಿದ್ದು, ಹಿಂದೆ ಇಲ್ಲಿ ಶೈವ ದೇವಾಲಯವಿರಬಹುದು. ಇಲ್ಲಿನ ಶಾಸನದಲ್ಲಿ ದೊರೆಯುವ ಅಕ್ಷರಗಳ ಆಧಾರದಿಂದ ಇಲ್ಲಿ ಶ್ರೀ ರಂಗನಾಥ ದೇವಾಲಯವಿರಬಹುದು ಎಂದು ಊಹಿಸಬಹುದು.

ಸದ್ಯ ಈ ಪ್ರದೇಶದಲ್ಲಿ ಒಂದು ಶಾಸನ, ಆ ಶಾಸನದ ಮೇಲೆ ನಂದಿ, ವೀರಭದ್ರ, ನಾಗರ ಶಿಲ್ಪಗಳಿವೆ.

ವೀರನಾದವನ್ನು ಮೆಚ್ಚುವುದರಲ್ಲಿ ಅವನ ಗುಣಗಳನ್ನು ಗೌರವಿಸುವುದರಲ್ಲಿ ವೀರತನವನ್ನು ಎತ್ತಿಹಿಡಿದ ಸಮಾಜ, ವೀರರಲ್ಲದವರನ್ನು, ಹೇಡಿಗಳನ್ನು ತಿರಸ್ಕಾರದಿಂದ

ನೋಡುವುದರ ಮೂಲಕವೂ ವೀರತನವನ್ನು ಎತ್ತಿಹಿಡಿಯುತ್ತಿದ್ದರು. ಪ್ರಪಂಚದ ಯಾವ ಧರ್ಮವೂ ಸಂಯಮ ಕ್ಷಮಾಶೀಲ ಗುಣಗಳ ಸೆರಗನ್ನು ಹಾಕಿಕೊಂಡಿರುವ ಹೇಡಿತನವನ್ನು ಮೆಚ್ಚುವುದಿಲ್ಲ. ಏಕೆಂದರೆ ಹೊರಾಡಿ ಸೋತು ಮಡಿದವರನ್ನು ಎಂದೂ ಎಲ್ಲಿಯೂ ಹೇಡಿಗಳೆಂದು ಪರಿಗಣಿಸಿರುವುದು ಕಂಡುಬರುವುದಿಲ್ಲ.[೪೮]

ಯಾರು ಯುದ್ಧಕ್ಕೆ ಹೋಗಿ ಹೋರಾಡಿ ಸಾಯುತ್ತಾರೋ ಅವರಿಗೆ ಪುನಃ ಮನುಷ್ಯ ಜನ್ಮ ಪ್ರಾಪ್ತವಾಗುತ್ತದೆ. ಮನುಷ್ಯ ಶರೀರವಾದ ಮೇಲೆ ಮರವೆಯ ಅಂಧಕಾರ ಪ್ರಾಪ್ತವಾಗುತ್ತದೆ. ಆದುದರಿಂದ ಒಳ್ಳೆಯ ಕರ್ಮ ಮಾಡುವುದರಲ್ಲಿ ಪ್ರತಿಯೊಬ್ಬನೂ ನಿರತನಾಗಬೇಕು. ರಣರಂಗದಲ್ಲಿ ಸತ್ತರೆ ಮನೆಗೆ ಹಿಂದಿರುಗಿ ಬಂದಂತೆ.[೪೯] ವೀರ ಮರಣವನ್ನು ಪಡೆಯುವುದು ವೀರನಿಗೆ ಮಾತ್ರವಲ್ಲ ಆತನ ತಾಯಿಗೂ ಹೆಮ್ಮೆಯ ಸಂಗತಿಯಾಗಿತ್ತು.

ಗ್ರಾಮಸ್ಥರು ಶಿಲ್ಪ ಮತ್ತು ಎರಡು ವೀರಗಲ್ಲುಗಳನ್ನು ಈ ಪ್ರದೇಶದಲ್ಲಿ ಪುನರ್ ಸ್ಥಾಪಿಸಿ ಪೂಜಿಸುತ್ತಿದ್ದಾರೆ.

**೪. ವೀರಗಲ್ಲು ೧**

ಈ ವೀರಗಲ್ಲು ಶಾಸನವು ಒಂದೇ ಹಂತದ ಉಬ್ಬುಶಿಲ್ಪದಿಂದ ಕೂಡಿದೆ. ಇಲ್ಲಿ ಚಿತ್ರಗೊಂಡಿರುವ ಶಿಲ್ಪಗಳು ಅಥವಾ ವೀರರು ಕತ್ತಿಯನ್ನು ಹಿಡಿದು ಕಾಳಗ ಮಾಡುತ್ತಿರುವುದನ್ನು ಆಕರ್ಷಕವಾಗಿ ಚಿತ್ರಿಸಿದ್ದಾರೆ.

**೫. ವೀರಗಲ್ಲು ೨**

ಈ ವೀರಗಲ್ಲು ಶಾಸನ ಒಂದೇ ಹಂತದಲ್ಲಿದ್ದು, ಇಬ್ಬರು ಪುರುಷರು ಬಿಲ್ಲು ಮತ್ತು ಬಾಣಗಳನ್ನು ಹಿಡಿದು ನಿಂತಿದ್ದರೇ, ಆತನ ಬಲಭಾಗದಲ್ಲಿ ಕೆಳಗೆ ೩ ಶ್ವಾನಗಳು ಎಡಭಾಗದಲ್ಲಿ ಎರಡು ಕೈಗಳನ್ನು ಮುಗಿದು ನಮಸ್ಕರಿಸುತ್ತಿರುವ ವ್ಯಕ್ತಿಯ ಚಿತ್ರವಿದೆ. ಇನ್ನೊಬ್ಬನು ಬಿಲ್ಲಿನ ಎದುರು ನಿಂತಿರುವ ಚಿತ್ರವಿದೆ.

ಈ ಸಂಶೋಧನಾ ಅಧ್ಯಯನದ ವ್ಯಾಪ್ತಿಯಲ್ಲಿ ವೀರಗಲ್ಲುಗಳು ತೀರಾ ವಿರಳವಾಗಿ ಕಂಡುಬರುತ್ತವೆ. ತಾಲೂಕಿನ **ರಾಜಾಪುರ, ತೇಕರಾಳ, ತೋಟಾಪುರ** ಗ್ರಾಮಗಳಲ್ಲಿ ಇಂತಹ ವೀರಗಲ್ಲುಗಳನ್ನು ಕಾಣಬಹುದು. ಶಹಾಪುರ ಪರಿಸರದಲ್ಲಿ ಹೆಚ್ಚಾಗಿ ಇಂತಹ ಶಾಸನಗಳು ಕಂಡುಬರುವುದಿಲ್ಲ. ಆದರೆ **ಸಿರವಾಳ, ಹುಲ್ಕಲ್ (ಕೆ)** ಗ್ರಾಮದಲ್ಲಿ ಈ ಶಾಸನಗಳು ದೊರಕಿವೆ.

## ೩.೩ ಮಹಾಸತಿಗಲ್ಲು

ಕರ್ನಾಟಕದಲ್ಲಿ ಈ ಮಹಾಸತಿ ಆಚರಣೆಯು ಒಂದು ಪ್ರಮುಖವಾದ ಸ್ಥಾನವನುಪಡೆದುಕೊಂಡಿತ್ತು. ಪತಿಯು ಮರಣ ಹೊಂದಿದ ಸಂದರ್ಭದಲ್ಲಿ ಅಥವಾ ಪತಿಯ್ನ

ಮರಣಾನಂತರ ಸ್ವಇಚ್ಛೆಯಿಂದ ಯಾರ ಒತ್ತಾಯವಿಲ್ಲದೆ ಪತ್ನಿಯು ಚಿತೆಗೆ ಹಾರಿ ಪ್ರಾಣತ್ಯಾಗವನ್ನು ಮಾಡುವ ಈ ಪದ್ಧತಿಯು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಹೈದರಾಬಾದ್ ಕರ್ನಾಟಕದಲ್ಲಿ ಅದರಲೂ ಗುಲ್ಬರ್ಗಾ ಜಿಲ್ಲೆಯಲ್ಲಿ ಅಷ್ಟೊಂದು ಮಹಾಸತಿಗಲ್ಲುಗಳು ಕಂಡುಬರುವುದಿಲ್ಲ. ಅದೇ ರೀತಿ ಶಹಾಪುರ ತಾಲೂಕಿನಲ್ಲಿ ಏಕೈಕ ಮಹಾಸತಿ ಆಚರಣೆಗೆ ಸಂಬಂಧಿಸಿದ ಶಾಸನವನ್ನು ಕೊಂಕಲ್ ಗ್ರಾಮದಲ್ಲಿ ಕಾಣಬಹುದು. ಆದರೆ ಈ ಸಂಶೋಧನಾ ಅಧ್ಯಯನ ವ್ಯಾಪ್ತಿಯಲ್ಲಿ ಎಲ್ಲಿಯೂ ಈ ಮಹಾಸತಿ ಆಚರಣೆಯ ಶಾಸನಗಳು ಕಂಡುಬಂದಿರುವುದಿಲ್ಲ.

### ೩.೩.೧ ನಿಷಧಿಗಲ್ಲು

ನಿಷಧಿಗಲ್ಲುಗಳು ಜೈನ ಧರ್ಮಕ್ಕೆ ಸಂಬಂದಿಸಿದ ಸ್ಮಾರಕಗಳಾಗಿವೆ. ಸನ್ಯಾಸ ವಿಧಿಯಿಂದ ಸಲ್ಲೇಖನ ವ್ರತಧಾರಿಗಳಾಗಿ ಸಮಾಧಿಕರಣ(ಮರಣ) ಹೊಂದಿದವರ ಸ್ಮರಣೆಗಾಗಿ ಹಾಕಿಸಲಾಗುವ ಕಲ್ಲುಗಳನ್ನು ಅಥವಾ ಶಾಸನಗಳನ್ನು ನಿಷಧಿಗಲ್ಲುಗಳೆಂದು ಕರೆಯುತ್ತಾರೆ.

ಜೈನಧರ್ಮದ ಸನ್ಯಾಸಿಗಳೇ ಅಲ್ಲದೆ ಶ್ರೀಸಾಮಾನ್ಯರು ಸಹ ಈ ವ್ರತವನ್ನು ಕೈಗೊಂಡು ಸಲ್ಲೇಖನ ಹೊಂದುತ್ತಿದ್ದರು. ಅಂತಹ ವ್ಯಕ್ತಿಗಳ ನೆನಪಿಗಾಗಿ ಈ ಶಾಸನಗಳನ್ನು ಹಾಕಿಸುತ್ತಿದ್ದರು.

ಚಾರಣಗೇರಾ ಗ್ರಾಮದ ಬೆಟ್ಟದ ಮೇಲಿರುವ ಈ ಉಬ್ಬುಶಿಲ್ಪಗಳು ನಿಷಧಿ ಶಾಸನಗಳಾಗಿವೆ. ಬೆಟ್ಟದ ಏಕಶಿಲಾ ಬಂಡೆಯಲ್ಲಿ ತ್ಯಾಗ, ವೈರಾಗ್ಯದ ಸಿದ್ಧಿಗಾಗಿ ಸಮಾಧಿ ಮರಣ ಹೊಂದಿದವರ ಶಿಲ್ಪಗಳು ಇವೆ. ಅಲ್ಲದೆ ಇಲ್ಲಿ ಶ್ರೀಚರಣ, ಪಿಂಛಿ, ಕಮಂಡಲುಗಳ ಚಿತ್ರವನ್ನು ಕಾಣಬಹುದು.

ಈ ಸಂಶೋಧನಾ ಅಧ್ಯಯನ ವ್ಯಾಪ್ತಿಗೆ ಒಳಪಟ್ಟ ಪ್ರದೇಶದಲ್ಲಿ ನಿಷಧಿಗಲ್ಲು ತುಂಬಾ ಅಪರೂಪವೆಂದು ಹೇಳಬಹುದು. ಜೈನ ಕುರುಹುಗಳನ್ನು ಹೊಂದಿದ ಗ್ರಾಮಗಳಾದ ಗೋಗಿ, ಮದ್ರಿಕಿ, ಸಿರವಾಳ ಇತ್ಯಾದಿಗಳಲ್ಲಿ ಎಲ್ಲಿಯೂ ಇಂತಹ ಶಾಸನಗಳು ಕಂಡುಬಂದಿಲ್ಲ.

### ೩.೪ ಶಹಾಪುರ ಪರಿಸರದ ಶಾಸನಗಳ ಸಾರಾಂಶ

#### ೧. ಅಣಬಿ ಶಾಸನಗಳು ೧

| | | |
|---|---|---|
| ಶಾಸನ ನಿವೇಶನ | : | ಹಿರೇಮಠದ ಪ್ರವೇಶ ದ್ವಾರದ ಮುಂಭಾಗದಲ್ಲಿ ನಿಲ್ಲಿಸಲಾಗಿದೆ. |
| ಅರಸ/ಮಾಂಡಳಿಕರು | : | ಉಲ್ಲೇಖವಿಲ್ಲ. |
| ಭಾಷೆ/ಲಿಪಿ | : | ಬ್ರಾಹ್ಮಿ. |

**ಸಾರಾಂಶ :**

ಅಣಬಿ ಗ್ರಾಮದ ಮಧ್ಯದಲ್ಲಿರುವ ಹಿರೇಮಠದ ಗೋಡೆಯ ಮುಂದೆ ಇರುವ ಈ ಶಾಸನವು ಸ್ಥಳೀಯವಾಗಿ ದೊರೆಯುವ ಸೇದಿಕಲ್ಲಿನಲ್ಲಿ ಕೊರೆದಿರುವ ಶಾಸನದಲ್ಲಿ ಲಿಪಿ ಮತ್ತು ಉಬ್ಬುಶಿಲ್ಪವಿದೆ. ೬ ಅಡಿ ಎತ್ತರ, ೨ ಅಡಿ ಅಗಲ, ೪ ಇಂಚು ದಪ್ಪವಿರುವ ಶಾಸನದಲ್ಲಿ ಉಬ್ಬು ಶಿಲ್ಪಗಳನ್ನು ಮೂರು ಹಂತದಲ್ಲಿ ಕೊರೆಯಲಾಗಿದೆ.

**ಮೊದಲ ಹಂತ**

ಶಾಸನದ ಮೇಲ್ಭಾಗದ ಹಂತದಲ್ಲಿ ಕಮಾನುಗಳನ್ನು ಚಿತ್ರಿಸಿದ್ದಾರೆ.

**ಎರಡನೇ ಹಂತ**

ಮಧ್ಯದ ಹಂತವು ಉಬ್ಬುಶಿಲ್ಪ ಮತ್ತು ಲಿಪಿಸಹಿತವಾಗಿ ರಚನೆಗೊಂಡಿದ್ದು, ಇಲ್ಲಿ ಎತ್ತಿನ ಚಕ್ಕಡಿಯಲ್ಲಿ ಪೀಠದ ಮೇಲೆ ದಂಪತಿಗಳು ಕುಳಿತ ಇವರು ಸಂಭಾಷಣೆಯಲ್ಲಿ ತೊಡಗಿದಂತೆ ಗೋಚರಿಸುತ್ತದೆ. ಅಲ್ಲದೆ ಇವರ ಹಿಂದೆ ಸೇವಕರನ್ನು ಕಾಣಬಹುದು. ಈ ದಂಪತಿಗಳ ಸ್ತ್ರೀಯ ಪ್ರತಿಮೆಯ ಬಲಗಡೆ "**ಘುರತಮಶೋಪಾಲಯ**" ಎಂದು ಬರೆದು ಮೇಲಿನಿಂದ ಕೆಳಮುಖವಾಗಿರುವ ಬ್ರಾಹ್ಮಿಲಿಪಿಯ ೮ ಅಕ್ಷರಗಳನ್ನು ಕಾಣಬಹುದು.

**ಮೂರನೇ ಹಂತ**

ಈ ಹಂತದಲ್ಲಿ ಜೋಡೆತ್ತಿನ ಚಕಡಿಯ ಚಿತ್ರ ಇದೆ.

"ಈ ಕಾಲಾವಧಿಯಲ್ಲಿ ಚಕಡಿಯನ್ನು ವರ್ತಕರು ಸಾರಿಗೆ ಸಾಧನವಾಗಿಬಳಸುತ್ತಿದ್ದರು, ಇದು ವರ್ತಕರ ಸಂಕೇತವಾಗಿದೆ ಎಂದು ತಿಳಿಯುತ್ತದೆ."

**೨. ಶಾಸನಗಳು ೨**

| | | |
|---|---|---|
| ಶಾಸನ ಸ್ಥಳ | : | ಅಣಬಿ. |
| ಶಾಸನ ನಿವೇಶನ | : | ಹಿರೇಮಠದ ಉತ್ತರ ಭಾಗಕ್ಕಿರುವ ಕಿಟಕಿಯ ಕೆಳಗೆ. |
| ಅರಸ/ಮಾಂಡಳಿಕರು | : | ಉಲ್ಲೇಖವಿಲ್ಲ . |
| ಭಾಷೆ/ಲಿಪಿ | : | ಕನ್ನಡ. |

**ಸಾರಾಂಶ**

ಗ್ರಾಮದ ಮಧ್ಯದಲ್ಲಿರುವ ಹಿರೇಮಠದ ಉತ್ತರ ಭಾಗಕ್ಕಿರುವ ಕಿಟಕಿಯ ಕೆಳಭಾಗದಲ್ಲಿದೆ. ಕ್ರಿ.ಶ.೧೬೪೦ರಲ್ಲಿ ಸರ್ವಜಿತು ಸಂವತ್ಸರದ ಅಶ್ವಿಜ ಶುದ್ಧ ಏಕಾದಶಿಯಂದು ಮಠಕ್ಕೆ ದ್ವಾರ (ತಲೆ) ಬಾಗಿಲನ್ನು ನಿರ್ಮಿಸಿದ ಬಗ್ಗೆ ಈ ಶಾಸನವು ವಿವರಣೆ ನೀಡುತ್ತದೆ.

**೩. ಸಿರವಾಳ ಶಾಸನಗಳು ೧**

| | | |
|---|---|---|
| ಶಾಸನ ನಿವೇಶನ | : | ಶ್ರೀ ಹನುಮಾನ ದೇವಾಲಯ |
| ಕಾಲ | : | ಶಕವರುಷ ೧೪೫೯ (ಕ್ರಿ.ಶ.೧೫೩೭ರಲ್ಲಿ). |
| ಭಾಷೆ/ಲಿಪಿ | : | ಕನ್ನಡ. |
| ಧರ್ಮ | : | ವೈಷ್ಣವ. |

**ಸಾರಾಂಶ**

ಶ್ರೀ ಹನುಮಾನ ದೇವಾಲಯದ ಕಂಬದಲ್ಲಿರುವ ಈ ಶಾಸನವು ಶಕವರುಷ ೧೪೫೯ ರ(ಕ್ರಿ.ಶ.೧೫೩೭ರಲ್ಲಿ) ಶುಭಕೃತನಾಮ ಸಂವತ್ಸರದ ಶ್ರಾವಣ ಮಿರೆ ಬಿದಿಗೆಯ ಆದಿತ್ಯವಾರದಂದು 'ಶ್ರೀಮತ್ ಕಲಬುರುಗಿಯ ನಾಡೊಳಗೆ ವಿಭಾಗದ ಮಾಗುಡಿಯ ಮಲ್ಲೋಜನ ಪುತ್ರ **ದೇವರ್ಸರು** ಸಗರನಾಡೊಳಗೆ ಸಿರವಾಳ ಗ್ರಾಮದಲ್ಲಿ ಸೇನಬೋಗನಾಗಿದ್ದು, ಸ್ವ ಗ್ರಾಮದ ಹನುಮಂತ ದೇವರ ದೇವಸ್ಥಾನವನ್ನು ಶುಭಕೃತನಾಮ ಸಂವತ್ಸರದ ಚತುಸ್ಸಿ ಮಂಗಳವಾರದಂದು ಮುಗಿದಿತ್ತು ಎಂದು ತಿಳಿಸುತ್ತದೆ.[೫೦]

**೪. ಸಿರವಾಳ ಶಾಸನಗಳು ೨**

ಸಿರವಾಳ ಗ್ರಾಮದಲ್ಲಿನ ಇನ್ನೊಂದು ಶಾಸನವು ಜೋಡಿ ಹನುಮಂತ ದೇವಾಲಯದಲ್ಲಿದೆ. ಈ ಶಾಸನವು ನಾಲ್ಕು ಸಾಲಿನಿಂದ ಕೂಡಿದೆ. ಅಪೂರ್ಣ, ಅಸ್ಪಷ್ಟವಾದ ಶಾಸನವಾಗಿದೆ.

೧ ಸ್ವಸ್ತಿಶ್ರೀ ಪಡೆಯ

೨ *ಣ್ಣನ ಮಗ ಸ

೩ [ಪ]ಯ್ಯನ ಮಾಡಿಸಿದ

೪ ಕ[ಂ]ಭ [೫೧] ಎಂದು ವಿವರಿಸುವ ಪಠ್ಯವಿದೆ.

**೫. ರಸ್ತಾಪುರ ಶಾಸನ**

| | | |
|---|---|---|
| ಶಾಸನ ನಿವೇಶನ | : | ರಸ್ತಾಪುರ ಗ್ರಾಮದಲ್ಲಿ. |
| ಅರಸ/ಮಾಂಡಳಿಕರು | : | ಉಲ್ಲೇಖವಿಲ್ಲ. |
| ಕಾಲ | : | ೧೯ನೇ ಶತಮಾನ. |
| ಭಾಷೆ/ಲಿಪಿ | : | ಕನ್ನಡ. |

**ಸಾರಾಂಶ**

ಮದರಕಲ್ ಸ್ವಾಮಿ ತರದ ಗಡದ ರಾಚಪ್ಪನ ಮಗ **ಮುಡಬಸಯ್ಯ** ರಸ್ತಾಪುರದ ಶ್ರೀ ಗುತ್ತಿ ಬಸವೇಶ್ವರ ದೇವರಿಗೆ 'ಮಹರೂಪ' ಕೊಡಬೇಕು ಎಂಬ ವಿಷಯವನ್ನು ಶಾಸನ

ತಿಳಿಸುತ್ತದೆ.

**೬. ಗೋಗಿ ಶಾಸನ**

| | | |
|---|---|---|
| ಶಾಸನ ನಿವೇಶನ | : | ಜಿನಬಸದಿಯ ಚಂದ್ರಪ್ರಭ ತೀರ್ಥಂಕರನ ವಿಗ್ರಹದ ಕೆಳಭಾಗ. |
| ರಾಜವಂಶ | : | ರಾಷ್ಟ್ರಕೂಟ ಕಾಲದ್ದು. |
| ಅರಸ/ಮಾಂಡಳಿಕರು | : | ಉಲ್ಲೇಖವಿಲ್ಲ. |
| ಕಾಲ | : | ಕ್ರಿ.ಶ. ೧೧ನೇ ಶತಮಾನ. |
| ಭಾಷೆ/ಲಿಪಿ | : | ಕನ್ನಡ. |

**ಸಾರಾಂಶ**

ಗೋಗಿ ಗ್ರಾಮದಲ್ಲಿರುವ ರಾಷ್ಟ್ರಕೂಟರ ಕಾಲದಲ್ಲಿ ರಚನೆಯಾದ ಈ ಶಾಸನವು ಗ್ರಾಮದ ಮಧ್ಯದಲ್ಲಿರುವ ಶ್ರೀ ಪಾರ್ಶ್ವನಾಥನ ಜಿನ ಬಸದಿಯಲ್ಲಿದೆ. ಈ ಶಾಸನವು ಅತಿ ಪ್ರಮುಖವಾದ ಶಾಸನವಾಗಿದೆ. ಇದು ಜೈನ ಧರ್ಮದ **"ಯೂಪನಿ ಸಂಘವನ್ನು"** ತಿಳಿಯಲು ಸಹಾಯಕವಾಗಿದೆ. ಇದು ೪ ಸಾಲಿನ ಕಿರು ಶಾಸನವಾಗಿದ್ದು, ಬಸದಿಯ ಚಂದ್ರಪ್ರಭ ತಿರ್ಥಂಕರನ ವಿಗ್ರಹದ ಕೆಳಭಾಗದಲ್ಲಿದೆ. ಯೂಪನೀಯ ಸಂಘದ ಪಯೋರ್ಗ್ಗಣ ಧರ್ಮ ಕೀರ್ತಿ ದೇವರ ಪ್ರಿಯಶಿಷ್ಯ ಸಿರಿಸೆಟ್ಟಿ ಮಕ್ಕಳಾದ ತನುಜ ಮತ್ತು ರಾಮಿಸೆಟ್ಟಿ ಸೇರಿ ಚಂದ್ರನಾಥ ಮೂರ್ತಿಯನ್ನು ಕೆತ್ತಿಸಿದ ವಿಷಯವನ್ನು ಈ ಶಾಸನ ಉಲ್ಲೇಖಿಸುತ್ತದೆ.

'ಯೂಪನೀಯ ಸಂಘ ಎನ್ನುವುದು ಜೈನಧರ್ಮದ ಒಂದು ಪಂಥವಾಗಿದೆ ಅಥವಾ ಪಂಗಡವಾಗಿದೆ ಎಂದು ತಿಳಿಯುತ್ತದೆ.'

**೭. ಹಾರಣಗೇರಾ ಶಾಸನ**

| | | |
|---|---|---|
| ಶಾಸನ ನಿವೇಶನ | : | ಹಾರಣಗೇರಾ ಗ್ರಾಮದ ಹರಿಜನ ವಾಡ. |
| ರಾಜವಂಶ | : | ರಾಷ್ಟ್ರಕೂಟ |
| ಅರಸ/ಮಾಂಡಳಿಕರು | : | ಕನ್ನರದೇವ |
| ಭಾಷೆ/ಲಿಪಿ | : | ಕನ್ನಡ. |

**ಸಾರಾಂಶ**

ಮೂರು ಸಾಲಿನ ಶಾಸನವಾಗಿದ್ದು ಅಕ್ಷರಗಳು ಅಸ್ಪಷ್ಟವಾಗಿ ಗೋಚರಿಸುತ್ತವೆ. ಇದು ಅಪೂರ್ಣವಾಗಿದೆ. ಶಾಸನ ಪಠ್ಯವಿದೆ.

೧ ...ಗ್ರಹಾರದ

೨ ಳೆಯ ತ್ರೈಪುರ್ಷದೇವರ

೩ ಶಾಲೆ ಕನ್ನರದೇವನ ದ [೫೨]

**೮. ಮುದ್ರಿಕಿ ಶಾಸನ**

| | | |
|---|---|---|
| ಶಾಸನ ನಿವೇಶನ | : | ಮಲ್ಕಮ್ಮ (ಮಧುಕಮ್ಮ) ಮುಂದೆ. |
| ರಾಜವಂಶ | : | ಕಲ್ಯಾಣ ಚಾಲುಕ್ಯ(ಲಿಪಿ). |
| ಅರಸ/ಮಾಂಡಳಿಕರು | : | ಉಲ್ಲೇಖವಿಲ್ಲ. |
| ಭಾಷೆ/ಲಿಪಿ | : | ಕನ್ನಡ. |

**ಸಾರಾಂಶ**

ಗ್ರಾಮದ ಬಸವೇಶ್ವರ ದೇವಾಲಯದ ಹಿಂದಿರುವ ಮಲ್ಕಮ್ಮ (ಮಧುಕಮ್ಮ) ಗುಡಿಯ ಮುಂದೆ ಇರುವ ಶಾಸನದ ತುಂಡೊಂದನ್ನು ಕಾಣಬಹುದು. ಈ ಶಾಸನವು ೩ ತುಂಡಾಗಿದ್ದು ಮಧ್ಯದ ತುಂಡು ಮಾತ್ರ ದೇವಾಲಯದ ಮುಂದೆ ಬಿದ್ದಿದೆ. ಕಪ್ಪು ಶಿಲೆಯಲ್ಲಿ ರಚನೆಗೊಂಡ ಕಲ್ಯಾಣ ಚಾಲುಕ್ಯರ ಕಾಲದ ಶಾಸನವಾಗಿದೆ. ೩ ಸಾಲಿನಿಂದ ಕೂಡಿದ್ದು ಶಾಸನದಲ್ಲಿ ಸುಮಾರು ೨೫ ಅಕ್ಷರಗಳನ್ನು ಕಾಣಬಹುದು.

ಶಾಸನ ಪಠ್ಯ

೧ ೪೧ ನೆಯ ಸಿದ್ಧಾರ್ತ್ಥಿ ಸಂವತ್ಸ

೨ .. ಸ್ವಾ ಧ್ಯಾನ ಧ್ಯಾನ ಧಾರಣ

೩ ಮಯ್ಯೆಚ್ಚರ ಸಾದಿ[೫೩]

ಈ ತುಂಡು ಶಾಸನವು ಅಸ್ಪಷ್ಟವಾದ ವಿವರಣೆಯನ್ನು ನೀಡುತ್ತದೆ..

## ಪರ್ಶಿಯನ್ ಶಾಸನಗಳು

**೧. ಗೋಗಿ ಶಾಸನಗಳು ೧**

| | | |
|---|---|---|
| ಶಾಸನ ನಿವೇಶನ | : | ಅರ್ಬಾ ಮಸೀದಿಯಲ್ಲಿ. |
| ರಾಜವಂಶ | : | ದೆಹಲಿ ಸುಲ್ತಾನರು. |
| ಸುಲ್ತಾನರು | : | ಮಹಮದ್ ತುಘಲಕ್. |
| ಕಾಲ | : | ಹಿಜರಿ ೭೩೮ ಧುಲ್-ಹಿಜ್(೧) (ಕ್ರಿ.ಶ.೧೩೩೮). |
| ಭಾಷೆ/ಲಿಪಿ | : | ಪರ್ಶಿಯನ್. |

**ಸಾರಾಂಶ**

ಇದೊಂದು ತುಂಡು ಶಾಸನವಾಗಿದ್ದು, **ಖಾನ್-ಇ-ಮುಅಜ್ಜಿಂ** ಎಂಬುವವನು

**ಕಷಮರ್ಾ** ಎನ್ನುವ ವ್ಯಕ್ತಿಯ ಮೇಲ್ವಿಚಾರಣೆಯಲ್ಲಿ ಕೋಟೆಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ. ಹಿಜರಿ ೭೩೮ ಧುಲ್-ಹಿಜ್(೧) (ಕ್ರಿ.ಶ.೧೩೩೮) ರಲ್ಲಿ **ಮಹಮದ್ ತುಘಲಕ್** ದೊರೆಯ ಆಳ್ವಿಕೆಯಲ್ಲಿ ಖಿತ್ತಾ ಉಸ್ತಾದಾಬಾದ್ ಕೋಟೆಯ ನಿರ್ಮಾಣ ಕಾರ್ಯವನ್ನು ಮುಕ್ತಾಯಗೊಳಿಸಿದರು ಎಂದು ಶಾಸನದಿಂದ ತಿಳಿಯುತ್ತದೆ.[೫೪]

**೨. ಗೋಗಿ ಶಾಸನಗಳು ೨**

| | | |
|---|---|---|
| ಶಾಸನ ನಿವೇಶನ | : | ಸಂತ ಚಂದಾ ಹುಸೈನೀ ದರ್ಗಾದಲ್ಲಿ. |
| ರಾಜವಂಶ | : | ಉಲ್ಲೇಖವಿಲ್ಲ. |
| ಸುಲ್ತಾನರು | : | ಉಲ್ಲೇಖವಿಲ್ಲ. |
| ಕಾಲ | : | ಹಿಜರಿ ೮೫೮(ಕ್ರಿ.ಶ.೧೪೫೪). |
| ಭಾಷೆ/ಲಿಪಿ | : | ಉರ್ದು. |

**ಸಾರಾಂಶ**

ಗೋಗಿ ಗ್ರಾಮದ ಸಂತನಾಗಿದ್ದ ಚಂದಾ ಹುಸೈನಿಯು ಹಿಜರಿ ೮೫೮ (ಕ್ರಿ.ಶ.೧೪೫೪) ರಲ್ಲಿ ನಿಧನ ಹೊಂದಿದರು ಎಂದು ಉಲ್ಲೇಖಿಸುತ್ತದೆ.[೫೫]

**೩. ಗೋಗಿ ಶಾಸನಗಳು ೩**

| | | |
|---|---|---|
| ಶಾಸನ ನಿವೇಶನ | : | ಷಾ ಹಬೀಬುಲ್ಲಾ ಅವರ ಧ್ಯಾನ ಸ್ಥಾನದ ಬಾಗಿಲ ಮೇಲೆ. |
| ರಾಜವಂಶ | : | ಉಲ್ಲೇಖವಿಲ್ಲ. |
| ಸುಲ್ತಾನರು | : | ಉಲ್ಲೇಖವಿಲ್ಲ. |
| ಕಾಲ | : | ಹಿಜರಿ ೯೪೨ (ಕ್ರಿ.ಶ.೧೫೩೫-೩೬). |
| ಭಾಷೆ/ಲಿಪಿ | : | ಪರ್ಶಿಯನ್. |

**ಸಾರಾಂಶ**

ಷಾ ಹಬೀಬುಲ್ಲಾ ಅವರ ಧ್ಯಾನ ಮಾಡುತ್ತಿದ್ದ ಸ್ಥಳದಲ್ಲಿ ಒಂದು ಕೋಣೆಯನ್ನು (**ಹಜ್ರಾ, ಹಜಾರ**) ಹಿಜರಿ ೯೪೨(ಕ್ರಿ.ಶ.೧೫೩೫-೩೬) ರಲ್ಲಿ ನಿರ್ಮಿಸಲಾಯಿತು ಎಂದು ತಿಳಿಸುತ್ತದೆ.[೫೬]

**೪. ಗೋಗಿ ಶಾಸನಗಳು ೪**

| | | |
|---|---|---|
| ಶಾಸನ ನಿವೇಶನ | : | ಬಾಸ್ ಬಾಗ್ ಕಮಾನಿನ ಮೇಲೆ. |
| ರಾಜವಂಶ | : | ಉಲ್ಲೇಖವಿಲ್ಲ. |
| ಸುಲ್ತಾನರು | : | ಉಲ್ಲೇಖವಿಲ್ಲ. |

ಕಾಲ : ಹಿಜರಿ ೯೫೭ (ಕ್ರಿ.ಶ.೧೫೫೦–೫೧).

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಮನೆವಾರ್ತೆ ಸೇವೆಯ ಮುಖ್ಯಸ್ಥನಾಗಿದ್ದ **ಮೀರ್–ತಾಜುದ್ದಿನ್–ಖಾಕಿಯ** ಪ್ರಯತ್ನದಿಂದ ಹಿಜರಿ ೯೫೭(ಕ್ರಿ.ಶ.೧೫೫೦–೫೧)ರಲ್ಲಿ ಅರಮನೆಯಂತಹ ಭವನವನ್ನು ಗೋಗಿ ಗ್ರಾಮದಲ್ಲಿ ನಿರ್ಮಿಸಿದ್ದನ್ನು ಶಾಸನವು ತಿಳಿಸುತ್ತದೆ.[೫೭]

**೫. ಗೋಗಿ ಶಾಸನಗಳು ೫**

ಶಾಸನ ನಿವೇಶನ : ಚಂದಾ ಹುಸೈನೀ ದರ್ಗಾದ ಪಶ್ಚಿಮ ದ್ವಾರದಲ್ಲಿ.

ರಾಜವಂಶ : ಬಿಜಾಪುರ ಆದಿಲ್ ಶಾಹಿ.

ಸುಲ್ತಾನರು : ಎರಡನೇ ಇಬ್ರಾಹಿಂ ಆದಿಲ್ ಷಾಶ

ಕಾಲ : ಹಿಜರಿ ೧೦೦೭ (ಕ್ರಿ.ಶ.೧೫೯೮–೯೯).

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಎರಡನೇ ಇಬ್ರಾಹಿಂ ಆದಿಲ್ ಶಾನ ಆಳ್ವಿಕೆಯ ಕಾಲದಲ್ಲಿ ಚಂದಾ ಹುಸೈನಿ ಸಮಾಧಿಯ ಬಳಿಯಲ್ಲಿ ಈ ಸುಂದರವಾದ ದ್ವಾರವನ್ನು ಹಿಜರಿ ೧೦೦೭ (ಕ್ರಿ.ಶ.೧೫೯೮–೯೯) ರಲ್ಲಿ **ಷೇಕ್ ಮಿಯಾನ್ ಮುತವಲ್ಲಿಯಿಂದ** ನಿರ್ಮಿಸ್ಪಟ್ಟಿತ್ತು ಎಂದು ತಿಳಿಯುತ್ತದೆ.[೫೮]

**೬. ಸಗರ ಶಾಸನಗಳು ೧**

ಶಾಸನ ನಿವೇಶನ : ಮುನಾವರ್ ಬಾದ ಷಾನ ಮಸೀದಿಯ ದಕ್ಷಿಣ ಗೋಡೆಯಲ್ಲಿ

ರಾಜವಂಶ : ಬಹಮನಿ ಸುಲ್ತಾನರು.

ಸುಲ್ತಾನರು : ಎರಡನೇ ಮಹಮದ್ ಷಾ

ಕಾಲ : ಕ್ರಿ.ಶ. ೧೪೯೦–೯೧.

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಇದೊಂದು ರಾಜಾಜ್ಞೆಯ ಶಾಸನವಾಗಿದೆ. ಹಜರತ್ ಮಹಮದ್ ಷಾನು ಸಗರದಲ್ಲಿ ಧರ್ಮಛತ್ರವನ್ನು ಮತ್ತು ನಗರದ ಸುತ್ತಲೂ ರಕ್ಷಣಾ ಗೋಡೆಯನ್ನು ನಿರ್ಮಿಸಲು **ಮುಬಾರತನಿಗೆ** ಆದೇಶಿಸಿದ ಶಾಸನವಾಗಿದೆ.[೫೯]

೭. ಸಗರ ಶಾಸನಗಳು ೨

ಶಾಸನ ನಿವೇಶನ : ಸೋಫಿ ಶರಮಸ್ತನ ಸಮಾಧಿ ಬಳಿ.

ರಾಜವಂಶ : ಬಹಮನಿ ಸುಲ್ತಾನರು.

ಸುಲ್ತಾನರು : ಮಹಮದ್ ಷಾ

ಕಾಲ : ಕ್ರಿ.ಶ.೧೪೬೧–೬೨.

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಸದರಿ ಶಾಸನವು ಮಹಮದ್ ಷಾನ ಪೂರ್ಣ ಹೆಸರು **"ಮಹಮದ್ ಮಹಮೂದ್"** ಎಂದು ತಿಳಿಸುತ್ತದೆ.[೬೦]

೮. ಸಗರ ಶಾಸನಗಳು ೩

ಶಾಸನ ನಿವೇಶನ : ಸಗರ ಕೋಟೆಯ ಮಹಾದ್ವಾರ ಪಶ್ಚಿಮ ದ್ವಾರ.

ರಾಜವಂಶ : ಬಹಮನಿ ಸುಲ್ತಾನರು.

ಸುಲ್ತಾನರು : ಫಿರೋಜ್ ಷಾ

ಕಾಲ : ಹಿಜರಿ ೮೧೦ ತದಿಗೆ. (ಕ್ರಿ.ಶ.೧೪೦೭)

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಕಪ್ಪು ಶಿಲೆಯಲ್ಲಿ ರಚನೆಗೊಂಡಿರುವ ಈ ಶಾಸನ ಒಂದೇ ಶಿಲಾಫಲಕದ ಮೇಲೆ ಎರಡು ಶಾಸನಗಳನ್ನು ಕೆತ್ತಲಾಗಿದೆ. ಫಿರೋಜ್ ಷಾನ ಆಳ್ವಿಕೆಯ ಸಂದರ್ಭದಲ್ಲಿ ಕೊತ್ವಾಲನಾದ (ರಾಜನ ಸೇವಕ) **ಫಹಿಮ್ (ಫಹಿಮಾಪತ್)** ಎಂಬುವವನು ಹಿಜರಿ ೮೧೦ ತದಿಗೆಯ (ಕ್ರಿ.ಶ.೧೪೦೭ರಲ್ಲಿ ರಂಜಾನ್ ತಿಂಗಳಿನಲ್ಲಿ) ಪಶ್ಚಿಮ ದ್ವಾರದ ಉಪ್ಪರಿಗೆ, ಮೊಗಸಾಲೆಗಳನ್ನು ನಿರ್ಮಿಸಿದನು ಎಂದು ತಿಳಿಸುತ್ತದೆ.

ಈತನ ಇನ್ನೊಂದು ಶಾಸನವು ವಿಶ್ವವಿಜೇತ ಫಿರೋಜ್ ಷಾನು ಇದನ್ನು ಕಟ್ಟಿಸಿದನು ಎಂದು ವರ್ಣಿಸಿದೆ. ಅಲ್ಲದೆ ನಸರತಾಬಾದಿನಂತಹ ಕೋಟೆ ಮತ್ತೊಂದಿಲ್ಲವೆಂಬ ಬರಹವನ್ನು ಕಾಣಬಹುದು.[೬೧]

೯. ಸಗರ ಶಾಸನಗಳು ೪

ಶಾಸನ ನಿವೇಶನ : ರೋಜಾ ಗ್ರಾಮದಲ್ಲಿ.

ರಾಜವಂಶ : ಬಹಮನಿ ಸುಲ್ತಾನರು.

ಸುಲ್ತಾನರು : ಅಹಮದ್‌ವಾಲಿ-ಆಲ್-ಬಹಮನಿ.

ಕಾಲ : ಕ್ರಿ.ಶ. ೧೪೨೯.

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಸಗರ ರೋಜಾ ಗ್ರಾಮದಲ್ಲಿ ದೊರೆತಿರುವ ಈ ಶಾಸನವು ಮಹಾಜ್ಞಾನಿಗಳ ಮಾರ್ಗದರ್ಶನ ಮತ್ತು ಸಹಕಾರದಿಂದ ಇಸ್ಲಾಂ ಧರ್ಮದವರು ದೇವರನ್ನು ಪ್ರಾರ್ಥಿಸುತ್ತಿದ್ದರು ಮತ್ತು ಕಾನೂನಿನ ರಕ್ಷಣೆ ಮಾಡುತ್ತಿದ್ದರು ಎಂದು ಹೇಳುತ್ತದೆ. "ಓ ದೇವರೇ ಬಹಮನ್ ಷಾನ ತೋಟದ ಹೂಗಳಿಗೆ ದುಷ್ಟ ಶಕ್ತಿಯ ಯಾವ ಕಣ್ಣು ತಾಕದಂತೆ ನೋಡಿಕೊ" ಎಂದು ವರ್ಣಿಸಿರುವುದನ್ನು ಕಾಣಬಹುದು.[೬೨]

**೧೦. ಸಗರ ಶಾಸನಗಳು ೩**

ಶಾಸನ ನಿವೇಶನ : ಸೋಫಿ ಶರಮಸ್ತನ ದರ್ಗಾದ ಬಾವಿ ಗೋಡೆಯಲ್ಲಿ.

ರಾಜವಂಶ : ಬಹಮನಿ ಸುಲ್ತಾನರು.

ಸುಲ್ತಾನರು : ಅಹಮದ್-ಶಾ ವಾಲಿ-ಆಲ್-ಬಹಮನಿ.

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

***ಖುದಾವಂದ ಖಾನ್‌***ನನ್ನು 'ಖಾನ್-ಜಹಾನನ್ ಹುದ್ದೆಗೆ' ಏರಿಸಿದ ವಿಷಯವನ್ನು ತಿಳಿಸುತ್ತದೆ.[೬೩]

## ಆದಿಲ್ ಶಾಹಿಗಳ ಶಾಸನಗಳು

ಸಗರ ಗ್ರಾಮದಲ್ಲಿ ಬಿಜಾಪುರದ ಆದಿಲ್ ಶಾಹಿಗಳ ಶಾಸನಗಳನ್ನು ಕಾಣಬಹುದು. ಕ್ರಿ.ಶ.೧೫೨೮-೨೯ರಲ್ಲಿನ ಶಾಸನದಲ್ಲಿ ಆದಿಲ್ ಖಾನನು ವಜೀರನೇ ಹೊರತು ರಾಜನಲ್ಲ ಎಂದು ಇದೆ.

ಗ್ರಾಮದಲ್ಲಿ ದೊರೆತ ಇನ್ನೊಂದು ಶಾಸನವು ೧೫೪೪ರ ಯುದ್ಧದಲ್ಲಿ ಮಡಿದ ವೀರ ಮಗ ಅಹ್ಮದ್ ಆತ್ಮಕ್ಕೆ ಶಾಂತಿ ನೆಮ್ಮದಿ ನೀಡೆಂದು ತಂದೆಯು ಅಲ್ಲಹುವಿನಲ್ಲಿ ಪ್ರಾರ್ಥನೆಯನ್ನು ಮಾಡಿದ್ದಾನೆ.

**೧೧. ಶಹಾಪುರ ಶಾಸನಗಳು ೧**

ಶಾಸನ ನಿವೇಶನ : ಶಹಾಪುರ ಕೋಟೆಯ ಪೂರ್ವದ ದ್ವಾರದ ಮೇಲೆ.

ರಾಜವಂಶ : ಬಿಜಾಪುರ ಆದಿಲ್ ಶಾಹಿಗಳು.

ಸುಲ್ತಾನರು : ಒಂದನೇ ಅಲಿ ಆದಿಲ್ ಷಾ

ಕಾಲ : ಹಿಜರಿ ೯೭೫ (ಕ್ರಿ.ಶ.೧೫೬೭–೬೮)

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಮೀರ್–ತಾಜುದೀನನು ದೇವದುರ್ಗ ಕೋಟೆಯ ಹೊರ ಗೋಡೆ ಮತ್ತು ಕೋಟೆಯ ಹೊಸ್ತಿಲನ್ನು ಜೀರ್ಣೋದ್ಧಾರವನ್ನು ಹಿಜರಿ ೯೭೫(ಕ್ರಿ.ಶ.೧೫೬೮–೬೯)ರಲ್ಲಿ ಮಾಡಿಸಿದನು ಎಂದು ತಿಳಿಸುತ್ತದೆ.[೬೪]

**೧೨. ಶಹಾಪುರ ಶಾಸನಗಳು ೨**

ಶಾಸನ ನಿವೇಶನ : ಶಹಾಪುರ ಕೋಟೆಯ ಎರಡನೇ ದ್ವಾರದ ಮೇಲೆ.

ರಾಜವಂಶ : ಬಿಜಾಪುರ ಆದಿಲ್ ಶಾಹಿಗಳು.

ಸುಲ್ತಾನರು : ಇಬ್ರಾಹಿಂ ಆದಿಲ್ ಷಾ

ಕಾಲ : ಕ್ರಿ.ಶ. ೧೫೫೫.

ಭಾಷೆ/ಲಿಪಿ : ಪರ್ಶಿಯನ್.



**ಸಾರಾಂಶ**

ಇಬ್ರಾಹಿಂ ಆದಿಲ್ ಷಾನ ಆಳ್ವಿಕೆಯ ಕಾಲದಲ್ಲಿ ಕಿಲ್ಲೆದಾರನಾಗಿದ್ದ **ಮಹಮದ್ ಯೂಸೂಪ್**ನು ಕೋಟೆಯ ನಿರ್ಮಾಣ ಕಾರ್ಯದಲ್ಲಿ ಪಾಲ್ಗೊಂಡಿದ್ದು, ಮಹತ್ವದ ಪಾತ್ರವನ್ನು ನಿರ್ವಹಿಸಿದ್ದಾನೆ ಎಂದು ಶಾಸನ ವಿವರಿಸುತ್ತದೆ.[೬೫]

**೧೩. ಶಹಾಪುರ ಶಾಸನಗಳು ೩**

ಶಾಸನ ನಿವೇಶನ : ನಗರದ ಪಶ್ಚಿಮ (ದಿಗ್ಗಿ ಅಗಸಿ) ದ್ವಾರದ ಮೇಲೆ.

ರಾಜವಂಶ : ಬಿಜಾಪುರ ಆದಿಲ್ ಶಾಹಿಗಳು.

ಸುಲ್ತಾನರು : ಒಂದನೇ ಅಲಿ ಆದಿಲ್ ಷಾ

ಕಾಲ : ಕ್ರಿ.ಶ. ೧೫೫೮–೫೯

ಭಾಷೆ/ಲಿಪಿ : ಪರ್ಶಿಯನ್.

**ಸಾರಾಂಶ**

ಅಂದು ಶಹಾಪುರ ನಗರಕ್ಕೆ **'ನಸರತಾಬಾದ್'** ಎಂದು ನಾಮಕರಣಗೊಳಿಸಿದ್ದನ್ನು ಉಲ್ಲೇಖಿಸುತ್ತದೆ. ಬಿಸ್ಮಿಲಾ ದೈವಸ್ತುತಿಯೊಂದಿಗೆ ಪ್ರಾರಂಭವಾಗುವ ಈ ಶಾಸನವು ಕುರಾನಿನ ಪ್ರಮುಖ ವಿಷಯಗಳನ್ನು ಒಳಗೊಂಡಿದೆ.[೬೬]

೧೪. ಶಹಾಪುರ ಶಾಸನಗಳು ೪

| | | |
|---|---|---|
| ಶಾಸನ ನಿವೇಶನ | : | ಹಜರತ್ ಮುಸಾಖಾದ್ರಿ ಮಸೀದಿ ಪಕ್ಕ (ಸದ್ಯ ಶಾಸನವು ಹೈದರಾಬಾದ್ ವಸ್ತು ಸಂಗ್ರಹಾಲಯದಲ್ಲಿದೆ). |
| ರಾಜವಂಶ | : | ಬಿಜಾಪುರ ಆದಿಲ್ ಶಾಹಿಗಳು. |
| ಸುಲ್ತಾನರು | : | ಎರಡನೇ ಅಲಿ ಆದಿಲ್ ಷಾ |
| ಕಾಲ | : | ಕ್ರಿ.ಶ. ೧೬೬೭. |
| ಭಾಷೆ/ಲಿಪಿ | : | ಪರ್ಶಿಯನ್. |

**ಸಾರಾಂಶ**

ಎರಡನೆ ಅಲಿ ಆದಿಲ್ ಷಾನ ಆಳ್ವಿಕೆಯ ಕಾಲದಲ್ಲಿ **ಶೇಖ ಅಬ್ದುಲ್ ಹಸನ್**ನನ್ನು ಶಹಾಪುರ ಬೆಟ್ಟದ ಮೇಲಿರುವ ಹಜರತ್ ಮುಸಾಖಾದ್ರಿ ಮಸೀದಿ ನಿರ್ಮಾಣ ಕಾರ್ಯದಲ್ಲಿ ಪ್ರಮುಖ ಪಾತ್ರ ವಹಿಸಿದನು ಎಂದು ಶಾಸನ ಪ್ರಸ್ತುತಪಡಿಸುತ್ತದೆ. [೬೭]

**೧. ತಾಮ್ರ ಶಾಸನ**

| | | |
|---|---|---|
| ಶಾಸನ ಸ್ಥಳ | : | ಶಹಾಪುರ. |
| ಶಾಸನ ನಿವೇಶನ | : | ಶ್ರೀ ವಿಶ್ವಕರ್ಮ ಏಕದಂಡಿಗಿ ಮಠ. |
| ರಾಜವಂಶ | : | ವಿಜಯ ನಗರ. |
| ಅರಸ | : | ಶ್ರೀ ಕೃಷ್ಣದೇವರಾಯ. |
| ಕಾಲ | : | ಶಾಲಿವಾಹನ ಶಕವರುಷ ೧೪೪೨ (ಕ್ರಿ.ಶ. ೧೫೨೦ರಲ್ಲಿ). |
| ಭಾಷೆ/ಲಿಪಿ | : | ಕನ್ನಡ. |

**ಸಾರಾಂಶ**

ಇದು ತಾಮ್ರ ಶಾಸನವಾಗಿದ್ದು, ನಗರದಲ್ಲಿ ದೊರೆತ ಏಕೈಕ ಕನ್ನಡ ಶಾಸನವಾಗಿದೆ. ಆನೆಗುಂದಿಯಲ್ಲಿಯ ವಿಶ್ವಕರ್ಮ ಪೀಠಕ್ಕೆ ಅಧಿಕಾರದ ಗದ್ದುಗೆಗಾಗಿ ನಡೆದ ಕಲಹದಲ್ಲಿ ಗೆದ್ದ ನೆನಪಿಗಾಗಿ ಈ ತಾಮ್ರ ಶಾಸನವನ್ನು ಶ್ರೀ ಕೃಷ್ಣದೇವರಾಯನು ಸಹಿ ಮತ್ತು ರಾಜಮುದ್ರೆಯೊಂದಿಗೆ ಬರೆದುಕೊಟ್ಟ ಶಾಸನವಾಗಿದೆ.

ಶಹಾಪುರದ ವಿಶ್ವಕರ್ಮ ಏಕದಂಡಿಗಿ ಮಠದಲ್ಲಿ ಇರುವ ಈ ಶಾಸನವು ಆನೆಗುಂದಿಯ ಪೀಠಕ್ಕಾಗಿ ಅಂತರವಳ್ಳಿಯ ನಿರಂಜನಯ್ಯ ಮತ್ತು ಮೂರು ಝಾವದಯ್ಯನವರ ನಡುವಿನ ಕದನದಲ್ಲಿ ಶ್ರೀ ಕೃಷ್ಣದೇವರಾಯನು ತ್ರಿಮತಸ್ಥ ಪಂಡಿತರ (ಪ್ರತಿ ಗುಂಪು ೫ ಜನ ಪಂಡಿತರನ್ನು ಒಳಗೊಂಡಿತ್ತು) ಸಭೆಯನ್ನು ಕರೆದು ಅವರ ಸಮ್ಮುಖದಲ್ಲಿ ವಾದ–

ಪ್ರತಿವಾದಗಳನ್ನು ಆಲಿಸಿ ಇಬ್ಬರು ಒದಗಿಸಿದ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿದ ನಂತರ ನಿರ್ಣಯವನ್ನು ಕೈಗೊಂಡರು. ಇದರ ಪ್ರಕಾರ ಸದ್ಯೋಜಾತ ವಂಶಸ್ಥರೇ ಈ ಪೀಠದ ಮುಖ್ಯಸ್ಥರೆಂದು ತೀರ್ಪು ನೀಡಿದರು. ಅಂತರವಳ್ಳಿಯ ಮುಖ್ಯಸ್ಥರಿಗೆ ಪೀಠದ ಮೇಲೆ ಯಾವುದೇ ಅಧಿಕಾರವಿಲ್ಲವೆಂದು ಹೇಳಲಾಯಿತು. ಹಾಗೆ ಸೋತ ಅಂತರವಳ್ಳಿಯ ವಂಶಸ್ಥರು ದಂಡವಾಗಿ ೧೩೦೦ ವರಹವನ್ನು ಕಟ್ಟಬೇಕಾಗಿತ್ತು. ಈ ಜಯದ ಕುರುವಾಗಿ ಶ್ರೀ ಕೃಷ್ಣದೇವರಾಯನು ತನ್ನ ಹಸ್ತಾಕ್ಷರದೊಂದಿಗೆ ರಾಜಮುದ್ರೆಯನ್ನು ಹಾಕಿಸಿ ಶಾಲಿವಾಹನ ಶಕವರುಷ ೧೪೪೨ ನೆಯ (ಕ್ರಿ.ಶ.೧೫೨೦) ವಿಕ್ರಮನಾಮ ಸಂವತ್ಸರ ಶ್ರಾವಣ ಶುದ್ಧ ೧೦ರಂದು ಬರೆದುಕೊಟ್ಟರೆಂದು ತಿಳಿಯುತ್ತದೆ.[೬೮]

## ತಾಲೂಕಿನ ಇತ್ತೀಚಿನ ಶಾಸನ ಸಂಶೋಧನೆಗಳು

### ೧. ಸಗರ ಗ್ರಾಮದ ಶಾಸನ

**ಡಾ.ಎಂ.ಎಸ್.ಸಿರವಾಳ** ಅವರು(ಕನ್ನಡ ಉಪನ್ಯಾಸಕರು ಸ. ಪ. ಪೂ. ಕಾ. ಸಗರ) ಸಗರ ಗ್ರಾಮದ ನಾರಪತ್ತ ಕೆರೆಯ ಬಳಿ ಕನ್ನಡ ಶಿಲಾಶಾಸನವನ್ನು ಪತ್ತೆ ಹಚ್ಚಿದ್ದಾರೆ. ನಾರಪತ್ತೆ ಕೆರೆಯ ಮೊದಲನೇ ತೂಬಿನ ಮಂಟಪದ ಗೋಡೆಗೆ ಅಂಟಿಸಿರುವ ಕರಿ ಗ್ರಾನೈಟ್ ಕಲ್ಲಿನ ಮೇಲೆ ಕ್ರಿ.ಶ.೧೬೭೯ರ ಕನ್ನಡ ಲಿಪಿಯುಳ್ಳ ಕನ್ನಡ ಶಿಲಾಶಾಸನದ ಮೇಲ್ಭಾಗದಲ್ಲಿ ಚಂದ್ರ, ಲಿಂಗ, ಆಕಳು, ಕರು, ಸೂರ್ಯ ಶಿಲ್ಪಗಳನ್ನು ಕಾಣಬಹುದು, ಶಾಸನದ ಸುತ್ತಲೂ ಆಲಂಕಾರಿಕವಾಗಿ ಗೆರೆಯನ್ನು ಕೊರೆಯಲಾಗಿದೆ.[೬೯] ನಿಧಿಗಳ್ಳರ ಕ್ರೌರ್ಯಕ್ಕೆ ತುತ್ತಾಗಿರುವ ಈ ಶಾಸನದ ಮಧ್ಯ ಬಾಗದಲ್ಲಿ ಕಬ್ಬಿಣದ ಸಲಾಕೆಗಳಿಂದ ಒಡೆದಿರುವುದರಿಂದ (ಶಾಸನ ಹಿಂದೆ ನಿಧಿ ಇದೆ ಎಂಬ ಅನುಮಾನದಿಂದ) ಅಕ್ಷರಗಳು ನಾಶವಾಗಿವೆ. ಶಾಸನವನ್ನು ಸ್ಪಷ್ಟವಾಗಿ ಅರ್ಥೈಸಲು ಸಾಧ್ಯವಾಗಿಲ್ಲ.

**ಸಾರಾಂಶ**

ಕನ್ನಡ ಶಿಲಾಶಾಸನದ ಮೇಲ್ಭಾಗದಲ್ಲಿ ಚಂದ್ರ, ಲಿಂಗ, ಆಕಳು, ಕರು, ಸೂರ್ಯ ಶಿಲ್ಪಗಳನ್ನು ಕೊರೆಯಲಾಗಿರುವ ಈ ಶಾಸನವು 'ಸ್ವಸ್ತಿ ಶ್ರೀಮತ್ ನೃಪ ಶಾಲಿವಾಹನ ಶಕೆ ೧೬೦೧ರ ಸಿದ್ಧಾರ್ಥಿನಾಮ ಸಂವತ್ಸರ'ದಲ್ಲಿ (ಕ್ರಿ.ಶ.೧೬೭೯ರಲ್ಲಿ) ಕೆರೆಯನ್ನು ನಿರ್ಮಿಸಿದ್ದು ಸೂರ್ಯ, ಚಂದ್ರರಿರುವವರೆಗೂ ಶಾಶ್ವತವಾಗಿರಲೆಂದು ಶಾಸನವು ಪ್ರಸ್ತಾಪಿಸುತ್ತದೆ. ಶಾಸನದ ೩-೪ ಭಾಗದಲ್ಲಿ ಸಲಾಕೆಗಳಿಂದ ಒಡೆದಿರುವುದರಿಂದ ಮಹತ್ವದ ಭಾಗದ ಅಕ್ಷರಗಳು ನಾಶವಾಗಿದ್ದರಿಂದ ಕೆರೆಯು ಯಾರಿಂದ ನಿರ್ಮಾಣವಾಯಿತು ಎಂಬ ಅಂಶದ ಮೇಲೆ ಪರದೆ ಎಳೆದಂತಾಗಿದೆ.

## ೨. ಹುರಸಗುಂಡಗಿ ಶಿಲಾ ಫಲಕ

**ಡಾ.ಎಂ.ಎಸ್ ಸಿರವಾಳ** ಅವರು ಹುರಸಗುಂಡಗಿ ಗ್ರಾಮದಲ್ಲಿ ಕ್ರಿ.ಶ. ಒಂದನೇ ಶತಮಾನದ ಬೌದ್ಧ ಶಿಲಾಫಲಕವನ್ನು ಪತ್ತೆ ಹಚ್ಚಿದ್ದಾರೆ. ಈ ಶಿಲಾಫಲಕವು ಸ್ಥಳೀಯವಾಗಿ ದೊರೆಯುವ ಸೇದಿ ಕಲ್ಲಿನಲ್ಲಿ ನಿರ್ಮಾಣವಾಗಿವೆ. ಇದು ೬ ಅಡಿ ಎತ್ತರ ೨ ಅಡಿ ಅಗಲವನ್ನು ಹೊಂದಿದ್ದು, ಮೂರು ಹಂತದಲ್ಲಿ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ. ಆದರೆ ಲಿಪಿರಹಿತವಾದ ಶಿಲಾಫಲಕವಾಗಿದೆ.[೬೦]

**ಮೊದಲ ಹಂತ**

ಮೂರು ಚೈತ್ಯಗಳ ಶಿಲ್ಪಗಳನ್ನು ಕಾಣಬಹುದು.

**ಎರಡನೇ ಹಂತ**

ಈ ಹಂತದಲ್ಲಿ ಎತ್ತಿನ ಚಕಡಿಯಲ್ಲಿ ಪೀಠದ ಮೇಲೆ ದಂಪತಿಗಳು ವಿಲಾಸ ಭಂಗಿಯಲ್ಲಿ ಕುಳಿತಿದ್ದಾರೆ. ಇವರ ಹಿಂದೆ ಸೇವಕರನ್ನು ಕಾಣಬಹುದು.

**ಮೂರನೇ ಹಂತ**

ಈ ಹಂತದಲ್ಲಿ ನೊಗ ಹೊತ್ತ ಸವಾರಿ ಜೋಡೆತ್ತಿನ ಚಕಶಾಶಶಶಶಡಿಯ ಚಿತ್ರ ಇದೆ. ಇದರಲ್ಲಿ ಒಂದು ಎತ್ತು ಮಲಗಿದ್ದು, ಇನ್ನೊಂದು ಎತ್ತು ನಿಂತಿದೆ.

**ಟಿಪ್ಪಣಿ**

೪೧. ಡಿ.ಎನ್.ಅಕ್ಕಿ, ಸ.ಸಿ, ಪುಟ : ೮೦

೪೨. ಬಿ.ಎನ್.ಹಿರೇಮಠ, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ : ೧೩೧

೪೩. ಎಚ್.ಎಸ್.ಗೋಪಾಲರಾವ್, ಕಲ್ಯಾಣ ಚಾಲುಕ್ಯರ ದೇವಾಲಯಗಳ ಒಂದು ಸಾಂಸ್ಕೃತಿಕ ಅಧ್ಯಯನ, ಪುಟ : ೧೩೨

೪೪. ರಂಗರಾಜ ವನದುರ್ಗ, ಶ.ತಾ.ಶಾ, ಪುಟ : ೨೮

೪೫. ಡಿ.ಎನ್.ಅಕ್ಕಿ, ಸ.ಸಿ, ಪುಟ : ೬೨

೪೬. ಎಂ.ಯಾಸಿನ್ ಖುದ್ದೋಸಿ ಮತ್ತು ಸಿತಾರಾಮ್ ಜಾಗಿರದಾರ, ಕ.ಪ.ಅ.ಮ.ಉ.ಶಾ – ದೋರನಹಳ್ಳಿ, ಪುಟ : ೧೫೪

೪೭. ಆರ್.ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪುಟ : ೪೦

೪೮. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ : ೨೫೦

೪೯. ಎಚ್.ಎಲ್.ನಾಗೇಗೌಡ,ಪ್ರವಾಸಿ ಕಂಡ ಇಂಡಿಯಾ ಭಾಗ–೧, ಪುಟ : ೨೧೮–೧೯
೫೦. ಎಂ ಶಿವಾನಂದ ಹೈ.ಕ.ಭಾ.ಕ.ಶಿ.ಶಾ – ಸಿರವಾಳ, ಪುಟ : ೨೬೦
೫೧. ಚನ್ನಬಸಪ್ಪ ಎಸ್ ಪಾಟಿಲ್ ಮತ್ತು ಬಾಲಸುಬ್ರಮಣ್ಯ, ಸಿರಿವಾಳ, ಪುಟ : ೧೩೬
೫೨. ಹನುಮಾಕ್ಷಿ ಗೋಗಿ, ಕ.ಜಿ.ಶಾ – ಹಾರಣಗೆರೆ, ಪುಟ : ೪೫೬
೫೩. ಅದೇ, ಕ.ಜಿ.ಶಾ – ಮದ್ರಿಕಿ, ಪುಟ : ೪೨೦
೫೪. ಎಂ.ಯಾಸಿನ್ ಖುದ್ದೋಸಿ ಮತ್ತು ಸಿತಾರಾಮ್ ಜಾಗಿರದಾರ, ಕ.ಪ.ಅ.ಮ.ಉ.ಶ – ಗೋಗಿ, ಪುಟ : ೧೫೭
೫೫. ಅದೇ, ಕ.ಪ.ಅ.ಮ.ಉ.ಶಾ – ಗೋಗಿ, ಪುಟ : ೧೫೭
೫೬. ಅದೇ, ಕ.ಪ.ಅ.ಮ.ಉ.ಶಾ – ಗೋಗಿ, ಪುಟ : ೧೫೮
೫೭. ಅದೇ, ಕ.ಪ.ಅ.ಮ.ಉ.ಶಾ – ಗೋಗಿ, ಪುಟ : ೧೫೮
೫೮. ಅದೇ, ಕ.ಪ.ಅ.ಮ.ಉ.ಶಾ – ಗೋಗಿ, ಪುಟ : ೧೫೯
೫೯. ರಂಗರಾಜ ವನದುರ್ಗ, ಶಹಾಪುರ ದರ್ಶನ, ಪುಟ : ೫
೬೦. ಅದೇ, ಶಹಾಪುರ ದರ್ಶನ, ಪುಟ : ೫
೬೧. ಎಂ.ಯಾಸಿನ್ ಖುದ್ದೋಸಿ ಮತ್ತು ಸಿತಾರಾಮ್ ಜಾಗಿರದಾರ, ಕ.ಪ.ಅ.ಮ.ಉ.ಶಾ– ಸಗರ, ಪುಟ : ೧೮೫
೬೨. ರಂಗರಾಜ ವನದುರ್ಗ, ಶಹಾಪುರ ದರ್ಶನ, ಪುಟ : ೫
೬೩. ಅದೇ, ಶಹಾಪುರ ದರ್ಶನ, ಪುಟ : ೫
೬೪. ಎಂ.ಯಾಸಿನ್ ಖುದ್ದೋಸಿ ಮತ್ತು ಸಿತಾರಾಮ್ ಜಾಗಿರದಾರ, ಕ.ಪ.ಅ.ಮ.ಉ.ಶ – ಶಹಾಪುರ ಪುಟ : ೧೮೭
೬೫. ರಂಗರಾಜ ವನದುರ್ಗ, ಶಹಾಪುರ ದರ್ಶನ, ಪುಟ : ೭
೬೬. ಅದೇ, ಶಹಾಪುರ ದರ್ಶನ, ಪುಟ : ೭
೬೭. ಅದೇ, ಶಹಾಪುರ ದರ್ಶನ, ಪುಟ : ೮
೬೮. ರಂಗರಾಜ ವನದುರ್ಗ, ಶ.ತಾ.ಶಾ, ಪುಟ : ೩೫–೩೬
೬೯. ಪ್ರಜಾವಾಣಿ ದಿನಪತ್ರಿಕೆ ೧೬ನೇ ಮಾರ್ಚ ಮತ್ತು ಸಂಯುಕ್ತ ಕರ್ನಾಟಕ ದಿನಪತ್ರಿಕೆಯ "ಕಲ್ಯಾಣ ಕರ್ನಾಟಕ" ವಿಶೇಷ ಪುರವಣಿ ೩೦ನೇ ಮಾರ್ಚ.
೭೦. ಪ್ರಜಾವಾಣಿ ದಿನಪತ್ರಿಕೆ ಮೇ ೨೦೧೦

ಮಾನವನು ಪ್ರಕೃತಿಯ ಒಂದು ಭಾಗ. ಆತನು ಯಾವುದೇ ವ್ಯಕ್ತಿ ಮತ್ತು ವಸ್ತುಗಳಿಗೆ ಹೆದರದೆ ಇದ್ದರೂ, ಪ್ರಕೃತಿಯ ಮಳೆ, ಗಾಳಿ, ಗುಡುಗು, ಸಿಡಿಲು ಇವುಗಳನ್ನು ಕಂಡು ಭಯ –ಭೀತಿಗೊಂಡನು. ಇವುಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸಿದನು. ಈ ಹಂತದಲ್ಲಿ ಮಾನವನು ಅಲೆದಾಡುವ ಪ್ರವೃತಿಯಲ್ಲಿದ್ದನು. ನಂತರ ಒಂದೆಡೆ ನೆಲೆ ನಿಂತು ಜೀವಿಸಲು ಪ್ರಾರಂಭಿಸಿದನು. ಈ ಹಂತವೇ ಗೃಹಗಳ ನಿರ್ಮಾಣ ಹಂತ. ಇಲ್ಲಿ ಮಾನವನು ತನ್ನ ರಕ್ಷಣೆಗಾಗಿ ಪ್ರಕೃತಿಯ ನಿಯಮಗಳಿಗೆ ವಿರುದ್ಧವಾಗದೆ ತಾನು ನೆಲೆ ನಿಂತ ಸ್ಥಳದಲ್ಲಿಯೇ ಸುತ್ತಲೂ ರಕ್ಷಣಾಗೋಡೆಗಳನ್ನು ನಿರ್ಮಿಸಿಕೊಂಡನು. ನಂತರದಲ್ಲಿ ಮಳೆ ಬಿಸಿಲಿನ ರಕ್ಷಣೆಗಾಗಿ ಈ ಗೋಡೆಗಳ ಮೇಲೆ ಹೊದಿಕೆಯನ್ನು ನಿರ್ಮಿಸಲು ಪ್ರಾರಂಭಿಸಿದನು.[೭೧] ಹೀಗೆ ಮಾನವನು ಒಂದೆಡೆ ನೆಲೆ ನಿಂತು ಜೀವಿಸಲು ಪ್ರಾರಂಭಿಸಿದನು.

ನಿಸರ್ಗದ ನಿಯಮಗಳಾದ ಹುಟ್ಟು, ಸಾವುಗಳನ್ನು ಕಂಡು ಮಾನವ ಭೀತಿಗೊಂಡನು. ಪ್ರಕೃತಿಯಲ್ಲಿ ಅಡಗಿರುವ ಶಕ್ತಿಯನ್ನು ತಿಳಿದುಕೊಳ್ಳಲು ಪೂಜೆಯನ್ನು ಪ್ರಾರಂಭಿಸಿದನು. ಪ್ರಾರಂಭದಲ್ಲಿ ಪ್ರಕೃತಿ, ಸೂರ್ಯ, ಚಂದ್ರರನ್ನು ಆರಾಧಿಸಿದ ಮನುಷ್ಯ ಮುಂದೆ ಮೂರ್ತಿಶಿಲ್ಪಗಳನ್ನು. ಪೂಜಿಸಲು ಪ್ರಾರಂಭಿಸಿದನು. ಅವುಗಳಿಗೆ ಮಂಡಲವನ್ನು ಹಾಕಿಕೊಂಡನು. ರಕ್ಷಣಾ ಗೋಡೆಗಳನ್ನು ನಿರ್ಮಿಸಲು ಪ್ರಾರಂಭಿಸಿದನು. ಹೀಗೆ ಪ್ರಾರಂಭದಲ್ಲಿ ದೇವಾಲಯಗಳು ಹಂತ ಹಂತವಾಗಿ ರೂಪಗೊಂಡವು.

ಪ್ರಾರಂಭದಲ್ಲಿ ಆಲಯಗಳನ್ನು ಪೂರ್ವಾಭಿಮುಖವಾಗಿ ಮೂರು ಬಂಡೆಗಳನ್ನು ನೆಟ್ಟು ನಂತರ ಇದರ ಮೇಲೆ ಹೊದಿಕೆಗಾಗಿ ಇನ್ನೊಂದು ಬಂಡೆಗಲ್ಲನ್ನು ಹಾಕಿ, ಮಧ್ಯದಲ್ಲಿ ಮೂರ್ತಿಯನ್ನು ಇಟ್ಟು ಪೂಜಿಸಲು ಪ್ರಾರಂಭಿಸಿದನ್ನು.[೭೨] ಇವುಗಳಿಂದ ಪ್ರೇರಣೆಗೊಂಡ ಮೌರ್ಯ ಸಾಮ್ರಾಟರು ಬೌದ್ಧ ಧರ್ಮಕ್ಕಾಗಿ ಗುಹಾಲಯಗಳು ಮತ್ತು ಸ್ತೂಪಗಳನ್ನು ನಿರ್ಮಿಸಿದರು. ನಂತರದಲ್ಲಿ ಇವುಗಳಿಂದ ಪ್ರೇರೇಪಿತಗೊಂಡ ಅರಸರು ದೇವರಿಗೆ ಪ್ರತ್ಯೇಕವಾಗಿ ದೇವಾಲಯಗಳನ್ನು ನಿರ್ಮಿಸಲು ಆರಂಭಿಸಿದವರೆಂದರೆ ಬಾದಾಮಿ ಚಾಲುಕ್ಯರು.

ಇವರು ದೇವಾಲಯಗಳ ರಚನೆಯನ್ನು ಪ್ರಯೋಗವಾಗಿ ಸ್ವೀಕರಿಸಿ ನೀರ್ಮಾಣಕ್ಕೆ ಕೈ ಹಾಕಿದರು. ನಂತರದ ರಾಜ ಮನೆತನಗಳ ಆಳ್ವಿಕೆಯಲ್ಲಿ ದೇವಾಲಯಗಳ ನಿರ್ಮಾಣವು ವಿಭಿನ್ನ ರೂಪ ಪಡೆದುಕೊಂಡವು, ಅವುಗಳೆಂದರೆ ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ, ಪಂಚಕೂಟ ಹೀಗೆ ದೇವಾಲಯಗಳ ನಿರ್ಮಾಣವು ಪ್ರಾಯೋಗಿಕವಾಗಿ ನಿರ್ಮಾಣಗೊಂಡವು. [೭೩] ಈ ಹಂತದಲ್ಲಿ ದೇವಾಲಯಗಳ ವಾಸ್ತುಶಿಲ್ಪ ಉತ್ತುಂಗ ಹಂತವನ್ನು ತಲುಪಿತು ಎಂದು ಹೇಳಬಹುದು.

**ದೇವಾಲಯದ ರಚನೆ**

ದೇವಾಲಯದ ರಚನೆಯನ್ನು ೬ ಭಾಗಗಳಾಗಿ ವಿಂಗಡಿಸಲಾಗಿದೆ.

೧. ಅಧಿಷ್ಠಾನ

೨. ಭಿತ್ತಿ

೩. ಪ್ರಸ್ತರ

೪. ಗ್ರೀವ

೫. ಶಿಖರ

೬. ಸ್ತೂಫಿ

**೧. ಅಧಿಷ್ಠಾನ** : ಇದು ಉಪಾನ, ಜಗತೀ, ಕುರ, ಕುಂಭ, ಕುಮುದ, ಪದ್ಮಗಳ, ಕಂಪ, ಕಪೋತ, ಪಟ್ಟಿಕಾ, ಪ್ರತೀ ಇತ್ಯಾದಿ ಅಂಗಗಳನ್ನು ಒಳಗೊಂಡಿರುತ್ತದೆ. [೭೪]

**೨. ಭಿತ್ತಿ (ಗೋಡೆ)** : ಅಧಿಷ್ಠಾನದ ಮೇಲಿನ ಭಾಗವೇ ಭಿತ್ತಿ. ದೇವಾಲಯದ ಮೇಲಿನ ಭಾರವನ್ನು ಹೊರಲು ಭಿತ್ತಿಯನ್ನು ನಿರ್ಮಿಸುತ್ತಾರೆ. ಇವುಗಳಲ್ಲಿ ಕೋಷ್ಠ, ವಾತಾಲಯ, ತೋರಣ, ಕುಂಭಲತಾ, ಭಿತ್ತಿಯ ಮಧ್ಯದಲ್ಲಿ ಅಳವಡಿಸುತ್ತಾರೆ.[೭೪]

**೩. ಪ್ರಸ್ತರ** : ಈ ಭಾಗವು ಭಿತ್ತಿಯ ಸ್ತಂಭದ ತುದಿಯಿಂದ ಪ್ರಾರಂಭವಾಗುತ್ತದೆ. ಇದು ಉತ್ತರ, ವಾಜನ, ವಲ್ಲಭೀ, ಕಪೋತ, ಆಲಿಂಗ, ಆಂತರಿಕ, ಪ್ರತೀ, ವಾಜನ ಎಂಬ ಅಂಗಗಳಿಂದ ಆವೃತವಾಗಿರುತ್ತದೆ.[೭೪]

**೪. ಗ್ರೀವ** : ಪ್ರಸ್ತರದ ಮೇಲಿನ ಭಾಗವೇ ಈ ಗ್ರೀವ ಭಾಗವಾಗಿದೆ. ಇಲ್ಲಿ ದೇವತಾ ಶಿಲ್ಪಗಳಿರುತ್ತವೆ.

**೫. ಶಿಖರ** : ಶಿಖರವು ವಿಷ್ಣುಛಂದ, ಬ್ರಹ್ಮಛಂದ, ರುದ್ರಛಂದ, ಶಾಲಾಕಾರ, ಗಜಪೃಷ್ಠಾಕಾರ ಅಂಗಗಳನ್ನು ಹೊಂದಿದೆ.[೭೪]

**೬. ಸ್ತೂಪಿ (ಕಳಶ–ಕಲಶ )** : ದೇವಾಲಯದ ಕೊನೆಯ ಭಾಗವೇ ಸ್ತೂಪಿ. ಇದು ಘಟ, ಗಳ,

ಮುಕುಲಗಳೆಂಬ ಭಾಗಗಳನ್ನು ಒಳಗೊಂಡಿದೆ.[೭೪]

ದೇವಾಲಯದ ಒಳಭಾಗ ಗರ್ಭಗೃಹ (ಗರ್ಭಗೃಹದ ಸುತಲೂ ಕೆಲವು ದೇವಾಲಯಗಳಲ್ಲಿ ಪ್ರದಕ್ಷಿಣ ಪಥವಿರುತ್ತದೆ). ಗರ್ಭಗೃಹದಲ್ಲಿಯ ಜಲ ಹೊರ ಹೋಗಲು ಜಲಪ್ರಣಾಳಿಕೆ ಇರುತ್ತದೆ. ಗರ್ಭಗೃಹದ ಮುಂದೆ ಅರ್ಧಮಂಟಪ, ಅಂತರಾಳ(ಸುಕನಾಸಿ), ನವರಂಗ ಮುಖಮಂಟಪಗಳಿಂದ ಕೂಡಿರುತ್ತದೆ. ದೇವಾಲಯದ ಹೊರಗೆ ಬಲಿಪೀಠ, ದೀಪಸ್ತಂಭ, ಗರುಡಸ್ತಂಭ, ಧ್ವಜಸ್ತಂಭ, ಮಾನಸ್ತಂಭಗಳಿರುತ್ತದೆ.[೭೫]

ದೇವಾಲಯದ ನಿರ್ಮಾಣದಲ್ಲಿ ಈ ಎಲ್ಲ ಅಂಶಗಳನ್ನು ಅಲಂಕಾರಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿದ್ದರು ಎಂದು ತಿಳಿಯುತ್ತದೆ.

## ೪.೧.ಶೈವ ದೇವಾಲಯಗಳು

### ೧. ಮದ್ರಿಕಿ

| | | |
|---|---|---|
| ಸ್ಥಳ | : | ಬಸವೇಶ್ವರ ದೇವಾಲಯ. |
| ಶೈಲಿ | : | ರಾಷ್ಟ್ರಕೂಟ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೧ನೇ ಶತಮಾನ. |
| ಸ್ಥಿತಿ | : | ಗರ್ಭಗೃಹವನ್ನು ಹೊರತುಪಡಿಸಿ ದೇವಾಲಯದ ಉಳಿದ ಭಾಗವು ಜೀರ್ಣೋದ್ಧಾರಗೊಂಡಿದೆ. (ಉತ್ತಮ) |
| ಸಂರಕ್ಷಣೆ | : | ಇದೆ. |

ಮದ್ರಿಕಿ ಗ್ರಾಮದ ಮಧ್ಯದಲ್ಲಿರುವ ಶ್ರೀ ಬಸವೇಶ್ವರ ದೇವಾಲಯವು ೧೧ನೇ ಶತಮಾನದ ಚಾಲುಕ್ಯ ದೊರೆ ಒಂದನೇ ಸೋಮೇಶ್ವರನಿಂದ ನಿರ್ಮಾಣವಾಗಿದೆ ಎಂದು ಇಲ್ಲಿಯ ಶಾಸನದಿಂದ ತಿಳಿಯುತ್ತದೆ. ಈ ದೇವಾಲಯದ ಅಧಿಷ್ಠಾನ ಭಾಗದ ನಿರ್ಮಾಣವು 'ಕಪೋತಬಂಧ'ದ ಪ್ರಕಾರದಲ್ಲಿದೆ. ಭಿತ್ತಿಯ ಮೇಲೆ ಇರುವ ಗ್ರೀವದ ಭಾಗವು ಮಳೆಯ ನೀರಿನಿಂದ ರಕ್ಷಣೆಗಾಗಿ ಮುಂದೆ ಚಾಚಿದಂತೆ ನಿರ್ಮಿಸಲಾಗಿದೆ. ಮೇಲ್ಭಾಗದಲ್ಲಿ ಶಿಖರ, ಸೂಪ್ತಿಗಳಿಂದ ಅಲಂಕೃತಗೊಂಡಿದೆ.

ಗರ್ಭಗೃಹದಲ್ಲಿ ನಂದಿಯ ವಿಗ್ರಹಗಳು ಇವೆ. ಇದನ್ನು ಕಪ್ಪು ಕಲ್ಲಿನಿಂದ ಮಾಡಲಾಗಿದೆ. ಈ ದೇವಾಲಯದಲ್ಲಿ ಎರಡು ನಂದಿ ವಿಗ್ರಹಗಳು ಕಂಡುಬರುತ್ತವೆ. ೧೧ನೇ ಶತಮಾನದ ಮೂಲ ವಿಗ್ರಹ ನಾಶವಾದ ಕಾರಣ ಗ್ರಾಮದ ಜನತೆ ನೂತನ ವಿಗ್ರಹಗಳನ್ನು ಅಲ್ಲಿ

ಪುನರ್ ಸ್ಥಾಪಿಸಿದ್ದಾರೆ. ದೇವಾಲಯದ ಮುಂದೆ ಮುಖಮಂಟಪ ಇದೆ. ಈ ದೇವಾಲಯವು ನಿರ್ಮಾಣ ಹಂತದಲ್ಲಿ ತ್ರಿಕೂಟ ದೇವಾಲಯವಾಗಿದ್ದು ಜಿರ್ಣೋದ್ಧಾರದ ನಂತರ ದ್ವಿಕೂಟ ದೇವಾಲಯುವಾಗಿ ಮಾರ್ಪಟ್ಟಿದೆ. ವಿಶಾಲವಾದ ಮುಖಮಂಟಪವಿದ್ದು ಈ ಮುಖಮಂಟಪದಲ್ಲಿ ಬಲಗಡೆಯ ಭಿತ್ತಿಯಲ್ಲಿ ಮಹಾಭಾರತದ ದೃಶ್ಯಾವಳಿಯನ್ನು ಕೊರೆಯಲಾಗಿದೆ. ಒಂದು ಬದಿಯಲ್ಲಿ ಅಶ್ವಾರೂಢವಾಗಿ ಯುದ್ಧಮಾಡುತ್ತಿರುವ ದೃಶ್ಯಾವಳಿಗಳನ್ನು, ಇನ್ನೊಂದು ಕಡೆ ಕೀರಾತಾರ್ಜುನರ ಯುದ್ಧದ ಸನ್ನಿವೇಶಗಳನ್ನು ಒಂದು ಫಲಕದಲ್ಲಿ ಕಾಣಬಹುದು. ಇದೇ ಪಾರ್ಶ್ವದ ಕೆಳಗೆ ಭಿತ್ತಿಯಲ್ಲಿ ಮಹಿಷಾಸುರ ಮರ್ದಿನಿಯ ಶಿಲ್ಪ ಮತ್ತು ಸೂರ್ಯವಿಗ್ರಹ ಕಂಡುಬರುತ್ತವೆ. ಸದ್ಯ ಈ ಸೂರ್ಯ ವಿಗ್ರಹವು ಮೂಲಗರ್ಭಗೃಹದಲ್ಲಿತ್ತು ಎಂದು ತಿಳಿಯುತ್ತದೆ.

ಈ ಮುಖಮಂಟಪದ ಬಲಗಡೆಯ ಕೊನೆಯಲ್ಲಿ ಈಶ್ವರ ದೇವಾಲಯ ಇದೆ. ಈ ದೇವಾಲಯದ ಗರ್ಭಗೃಹದ ಮಧ್ಯದಲ್ಲಿ ಕಪ್ಪು ಶಿಲೆಯಿಂದ ನಿರ್ಮಿಸಿದ ಲಿಂಗವು ಮನೋಜ್ಞವಾಗಿದೆ. ಈ ದೇವಾಲಯದ ಮುಂದೆ ಶ್ರೀ ಹನುಮಾನ ಮಂದಿರ ಇದೆ. ದೇವಾಲಯದ ಸುತ್ತಲೂ ರಕ್ಷಣಾ ಗೋಡೆಯನ್ನು ನಿರ್ಮಿಸಿದ್ದಾರೆ. ಈ ಬಸವೇಶ್ವರ ದೇವಾಲಯದ ಹೊರ ಭಾಗದಲ್ಲಿ ವಿಷ್ಣುವಿನ ವಿಗ್ರಹ, ಮಹಿಷಾಸುರ ಮರ್ದಿನಿಯ ವಿಗ್ರಹ, ಇತರೆ ವಿರೂಪಗೊಂಡಿರುವ ವಿಗ್ರಹಗಳನ್ನು ದೇವಾಲಯದ ಹೊರಗೋಡೆಯಲ್ಲಿ ಬಿಸಾಡಲಾಗಿದೆ. ದೇವಾಲಯದ ಮುಂದೆ ದ್ವೀಪಸ್ತಂಭವು ಇದೆ.

ಬಸವೇಶ್ವರ ದೇವಾಲಯದ ಹಿಂದೆ ಮಲ್ಕಮ್ಮ(ಮಧುಕಮ್ಮ) ಮತ್ತು ಪಾಲಕಮ್ಮ ದೇವಿಯರ ಚಿಕ್ಕ ಚಿಕ್ಕ ಗುಡಿಗಳನ್ನು ಕಾಣಬಹುದಾಗಿದೆ.

'ಸದ್ಯ ದೇವಾಲಯವು ಜಿರ್ಣೋದ್ಧಾರಗೊಂಡಿದ್ದರಿಂದ ಭಿತ್ತಿಯಲ್ಲಿರುವ ಪ್ರಮುಖ ಆಧಾರಗಳು ನಾಶವಾಗಿದೆ ಎಂದು ಹೇಳಬಹುದು.

**೨. ಈಶ್ವರ ದೇವಾಲಯ**

| | | |
|---|---|---|
| ಗ್ರಾಮ | : | ಮದ್ರಿಕಿ. |
| ಸ್ಥಳ | : | ಧಮೇತಿ ತೋಟದಲ್ಲಿ |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೦–೧೧ನೇ ಶತಮಾನ. |
| ಬಳಸಿದ ಕಲ್ಲು | : | ಕೆಂಪು ಮರಳು ಮಿಶ್ರಿತ ಕಲ್ಲಿನಿಂದ. |

ಸ್ಥಿತಿ : ಮಧ್ಯಮ.

ಸಂರಕ್ಷಣೆ : ಇಲ್ಲ.

ಮದ್ರಿಕಿ ಗ್ರಾಮದ ಪೂರ್ವದಲ್ಲಿರುವ ಧಮೇತಿ ತೋಟದಲ್ಲಿ ಈ ಶೈವ ದೇವಾಲಯವಿದೆ. ಈ ದೇವಾಲಯವು ಕ್ರಿ.ಶ.೧೦–೧೧ನೇ ಶತಮಾನದಲ್ಲಿ ನಿರ್ಮಾಣವಾಗಿದ್ದು, ಪೂರ್ವಾಭಿಮುಖವಾಗಿದೆ. ಗರ್ಭಗೃಹ ಮತ್ತು ಅರ್ಧಮಂಟಪವನ್ನು ಹೊಂದಿದ್ದು, ಗರ್ಭಗೃಹದ ಮಧ್ಯದಲಿರುವ ಕಪ್ಪು ಶಿಲೆಯ ಶಿವಲಿಂಗವು ಆಕರ್ಷಕವಾಗಿದೆ. ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿರುವ ಈ ದೇವಾಲಯವು ಸದ್ಯ ಶಿಥಿಲಾವಸ್ಥೆಯನ್ನು ತಲುಪಿದೆ. ದೇವಾಲಯದ ಮುಂದೆ ಕಲ್ಯಾಣ ಚಾಲುಕ್ಯರ ಪ್ರಮುಖ ಶಾಸನವನ್ನು ಕಾಣಬಹುದು. ಈ ದೇವಾಲಯದ ಮೇಲೆ ಶಿಖರ ಮತ್ತು ಸ್ತೂಪಿಯ ವ್ಯವಸ್ಥೆ ಕಂಡುಬರುವುದಿಲ್ಲ.

**೩. ಅಣಬಿ**

ಸ್ಥಳ : ಕುಂಬಾರ ಶಾಲೆಯ ಬೃಹತ್ ದೇಗುಲಗಳ ಗುಂಪು.

ಶೈಲಿ : ರಾಷ್ಟ್ರಕೂಟ.

ಅಭಿಮುಖ : ಪೂರ್ವಾಭಿಮುಖ.

ಕಾಲ : ಕ್ರಿ.ಶ. ೧೦–೧೧ನೇ ಶತಮಾನ.

ಬಳಸಿದ ಕಲ್ಲು : ಸಳೀಯವಾಗಿ ದೊರೆಯುವ ಸೇದಿಕಲ್ಲು.

ಸ್ಥಿತಿ : ಮಧ್ಯಮ.

ಸಂರಕ್ಷಣೆ : ಇಲ್ಲ.

ಅಣಬಿ ಗ್ರಾಮದ ಮಧ್ಯದಲ್ಲಿರುವ ಕುಂಬಾರ ಶಾಲೆ ಎಂದು ಪ್ರಸಿದ್ಧವಾಗಿರುವ ಈ ಸ್ಥಳವು ಹಲವಾರು ದೇಗುಲಗಳ ಸಮೂಹದಿಂದ ಕೂಡಿದ ಬೃಹತ್ ದೇಗುಲಗಳ ಸಮುಚ್ಛಯವಾಗಿದೆ. ಇದೂ ಸಹ ವಿದ್ಯಾ ಕೇಂದ್ರವಾಗಿರಬಹುದೆಂದು ಎಂದು ಊಹಿಸಬಹುದಾಗಿದೆ(ಇಲ್ಲಿ ದೇಗುಲಗಳ ಸಮೂಹದಿಂದಾಗಿ ಚಾಲುಕ್ಯರ ಕಾಲಾವಧಿಯಲ್ಲಿ ವಿದ್ಯಾ ಕೇಂದ್ರವಾಗಿರಬಹುದು).

ಈ ದೇಗುಲವು ಗರ್ಭಗೃಹ, ಅಂತರಾಳ, ಮುಖಮಂಟಪವನ್ನು ಹೊಂದಿದ್ದು, ಗರ್ಭಗೃಹವು ಆಯತಾಕಾರವಾಗಿದ್ದು, ದ್ವಾರದಲ್ಲಿ ಗಜಲಕ್ಷ್ಮಿಯ ಬಿಂಬ ಕಂಡುಬರುತ್ತದೆ. ರಾಷ್ಟ್ರಕೂಟರ ನಂತರ ಆಳ್ವಿಕೆ ನಡೆಸಿದ ಕಲ್ಯಾಣ ಚಾಲುಕ್ಯರು ಈ ದೇವಾಲಯಗಳನ್ನು ಪೋಷಿಸಿದ್ದರು. ಈ ದೇಗುಲದ ಮುಂದೆ ಕಲ್ಯಾಣ ಚಾಲುಕ್ಯರ ಕಾಲದ ಶಾಸನ ಕಂಡುಬರುತ್ತದೆ. ಅಣಬಿ (ಅಳಂಬೆ) ಅಗ್ರಹಾರದ ಕೂಡಲ ಮಲ್ಲಿಕಾರ್ಜುನ ದೇವರಿಗೆ ದಾನ ನೀಡಿದ

ವಿಷಯವನ್ನು ತಿಳಿಸುತ್ತದೆ.

"ಸದ್ಯ ದೇಗುಲವು ಸ್ಥಳೀಯರಿಂದ ಅವಕೃಪೆಗೆ ಒಳಗಾಗಿ ಅವಸಾನದ ಅಂಚಿನಲ್ಲಿದೆ. ದೇಗುಲವನ್ನು ಸ್ಥಳೀಯ ಕುಂಬಾರ ಜನಾಂಗದವರು ತಮ್ಮ ಕಸುಬನ್ನು ಮಾಡಲು ಉಪಯೊಗಿಸುತ್ತಿದ್ದಾರೆ. ಅದರ ಪರಿವೀಕ್ಷಣೆಗೆ ಹೋದ ಸಂಶೋಧಕರಿಗೆ ದೇಗುಲವನ್ನು ಪ್ರವೇಶಿಸದಂತೆ ತಡೆಯುತ್ತಾರೆ."

**೪. ರಾಮಲಿಂಗೇಶ್ವರ ದೇವಾಲಯ**

| | | |
|---|---|---|
| ಗ್ರಾಮ | : | ಅಣಬಿ. |
| ಸ್ಥಳ | : | ಶ್ರೀ ರಾಮಲಿಂಗೇಶ್ವರ ದೇವಾಲಯ. |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಅಭಿಮುಖ | : | ದಕ್ಷಿಣಾಭಿಮುಖ. |
| ಕಾಲ | : | ಕ್ರಿ.ಶ. ೧೧ನೇ ಶತಮಾನ. |
| ಬಳಸಿದ ಕಲ್ಲು | : | ಸ್ಥಳೀಯವಾಗಿ ದೊರೆಯುವ ಸೇದಿಕಲ್ಲು. |
| ಸ್ಥಿತಿ | : | ಉತ್ತಮ. |
| ಸಂರಕ್ಷಣೆ | : | ಇದೆ. |

ಅಣಬಿ ಗ್ರಾಮದ ಅಂಚಿನಲ್ಲಿ ಉತ್ತರ ದಿಕ್ಕಿಗೆ ಈ ದೇವಾಲಯವಿದ್ದು, ಇದು ಜನತೆಯ ಆರಾಧ್ಯ ದೈವವಾಗಿದೆ. ಶ್ರೀ ರಾಮಲಿಂಗೇಶ್ವರ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳಿಂದ ಕೂಡಿದ ಏಕಕೂಟ ದೇವಾಲಯವಾಗಿದೆ.

ಗರ್ಭಗೃಹದಲ್ಲಿರುವ ಶಿವಲಿಂಗವು ಮನೋಜ್ಞವಾಗಿದ್ದು ಶಿವಲಿಂಗಕ್ಕೆ ನಿತ್ಯವೂ ಪೂಜೆ ನಡೆಯುತ್ತದೆ. ದೇವಾಲಯದ ಭಿತ್ತಿಯು ಜಾಲಂಧ್ರಗಳಿಂದ ರಚಿತಗೊಂಡಿದೆ. ಪ್ರವೇಶಕ್ಕಾಗಿ ಮೆಟ್ಟಿಲುಗಳಿಂದ ಆವೃತ್ತಗೊಂಡಿದೆ. ಮುಖಮಂಟಪದಲ್ಲಿ ಗಣೇಶ ಮತ್ತು ನಂದಿಯ ವಿಗ್ರಹಗಳನ್ನು ಕಾಣಬಹುದು.

'ಸದ್ಯ ಅಣಬಿ ಗ್ರಾಮದಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ಈ ದೇವಾಲಯವು ಸುಭದ್ರ ಸ್ಥಿತಿಯಲ್ಲಿದೆ.'

**೫. ರಸ್ತಾಪುರ**

| | | |
|---|---|---|
| ಸ್ಥಳ | : | ಬಸವೇಶ್ವರ ದೇವಾಲಯ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ೧೯ನೇ ಶತಮಾನ. |

ಸ್ಥಿತಿ : ಉತ್ತಮ.

ಸಂರಕ್ಷಣೆ : ಇದೆ.

ರಸ್ತಾಪುರ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಶ್ರೀ ಶರಭಲಿಂಗೇಶ್ವರ ದೇವಾಲಯದ ಆವರಣದಲ್ಲಿ ಬಂಡೆಯ ಮೇಲೆ ಲಾಕುಳ ಪಂಥದ ಉಬ್ಬುಶಿಲ್ಪಗಳು ಕಂಡುಬರುವುದರಿಂದ ಇದೊಂದು ಶೈವ ದೇವಾಲಯವಾಗಿರಬಹುದು ಎಂದು ಅಂದಾಜಿಸಲಾಗಿದೆ.

ಅಷ್ಟೊಂದು ಪುರಾತನವಲ್ಲದ ಈ ದೇವಾಲಯವು ಕ್ರಿ.ಶ.೧೯ನೆಯ ಶತಮಾನದ ದೇವಾಲಯವಾಗಿದೆ. ಗರ್ಭಗೃಹ ಮುಖಮಂಟಪಗಳಿಂದ ನಿರ್ಮಾಣವಾಗಿದ್ದು ತೆರೆದ ಮುಖಮಂಟಪವು ಕಂಬಗಳಿಂದ ಕೂಡಿದಾಗಿದ್ದು ಮೇಲ್ಭಾಗದಲ್ಲಿ ಶಿಖರ ಸ್ತೂಪಿ ಕಂಡುಬರುತ್ತವೆ. ಪ್ರತಿ ವರ್ಷ ಏಪ್ರಿಲ್ ತಿಂಗಳಿನಲ್ಲಿ ಜಾತ್ರೆ ನಡೆಯುತ್ತದೆ.

**೬. ಶ್ರೀ ಸಂಗಮೇಶ್ವರ ದೇವಾಲಯ**

ಗ್ರಾಮ : ಡಿಗ್ಗಿ.

ಸ್ಥಳ : ಸಂಗಮೇಶ್ವರ ದೇವಾಲಯ.

ಶೈಲಿ : ಬಹಮನಿ.

ಅಭಿಮುಖ : ಈಶಾನ್ಯಾಭಿಮುಖ.

ಕಾಲ : ಕ್ರಿ.ಶ. ೧೪–೧೫ನೇ ಶತಮಾನ.

ಸ್ಥಿತಿ : ಉತ್ತಮ

ಸಂರಕ್ಷಣೆ : ಇದೆ.

ಶಹಾಪುರದಿಂದ ಪಶ್ಚಿಮಕ್ಕೆ ೪ ಕಿ.ಮೀ. ಡಿಗ್ಗಿ ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿರುವ ಈ ಸಂಗಮೇಶ್ವರ ದೇವಾಲಯವು ನೆಲಮಟ್ಟದಿಂದ ಸುಮಾರು ೧೦೦–೧೫೦ ಅಡಿಗಳಷ್ಟು ಎತ್ತರದಲ್ಲಿದೆ. ಗವಿಯ ಮುಂದೆ ಅರ್ದಮಂಟಪವು ಕಂಡುಬರುತ್ತದೆ. ಇದೊಂದು ಶೈವ ದೇವಾಲಯವಾಗಿದ್ದು. ಗರ್ಭಗೃಹದ ದ್ವಾರವು ಈಶಾನ್ಯ ದಿಕ್ಕಿನಲ್ಲಿದ್ದರೇ ಮೂಲ ವಿಗ್ರಹವು ಉತ್ತರಾಭಿಮುಖವಾಗಿದೆ. ಈ ದೇವಾಲಯುವು ೧೪–೧೫ನೆಯ ಶತಮಾನದ ದೇವಾಲಯವಾಗಿದ್ದು ಬಹಮನಿಯರ ವಾಸ್ತು ಶೈಲಿಯನ್ನು ಪ್ರತಿನಿಧಿಸುತ್ತದೆ.

ಇದೇ ರೀತಿ ಇಲ್ಲಿ ಹಲವಾರು ಗವಿಗಳಿವೆ. ಅವುಗಳಲ್ಲಿ ಅಲ್ಲಮಪ್ರಭು ಗವಿ, ಈರಡ್ಯ ಗವಿ ಪ್ರಮುಖವಾಗಿವೆ. ಈ ದೇವಾಲಯದ ಪ್ರವೇಶಕ್ಕಾಗಿ ಮೆಟ್ಟಿಲುಗಳು ಇದು, ಅವು ೧೪–೧೫ನೆಯ ಶತಮಾನದಲ್ಲಿ ನಿರ್ಮಾಣಗೊಂಡಿದ್ದು ಸುಮಾರು ೨ ಅಡಿ ಉದ್ದ ೧.೨೫ ಅಡಿ ಎತ್ತರವಿರುವ ಸುಮಾರು ೧೦೦ಕ್ಕೂ ಹೆಚ್ಚು ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳ

ಮಧ್ಯದಲ್ಲಿ ಬೃಹತ್ ೧೫ x ೧೫ ಅಡಿ ಸುತ್ತಳತೆಯ ಪ್ರವೇಶ ದ್ವಾರ ಇದೆ.

ಈ ಗರ್ಭಗೃಹದ ಮೇಲ್ಭಾಗದಲ್ಲಿ ಬೆಟ್ಟದ ಮೇಲೆ ಸಂತ ಚಂದಾ ಹುಸ್ಸೈನಿ ಮಸೀದಿಯು ಇದ್ದು, ಇದು ಹಿಂದು ಮುಸ್ಲಿಮರ ಭಾವೈಕ್ಯದ ತಾಣವಾಗಿದೆ. ಶ್ರಾವಣ ಮಾಸದ ನಾಲ್ಕನೇ ಸೋಮವಾರದಂದು ಶ್ರೀ ಸಂಗಮೇಶ್ವರ ಉಚ್ಚಯ, ಮಂಗಳವಾರ ರಥೋತ್ಸವ ಜರುಗುತ್ತದೆ. ಈ ಜಾತ್ರೆ ಒಂದು ವಾರ ನಡೆಯುತ್ತದೆ. ಶ್ರಾವಣ ಮಾಸದ ಕೊನೆಯ ಸೋಮವಾರದಂದು ನಡೆಯುವ **"ಕುಂಬಾರ ಜಾತ್ರೆ"** ಯಂದು ಜರುಗುವ ಹಾಲಗಂಭವು ನೋಡುಗರನ್ನು ಆಕರ್ಷಿಸುತ್ತದೆ.

**ಸಿರವಾಳ**

೧೧-೧೨ನೇ ಶತಮಾನದಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದು, ಈ ಸಿರವಾಳ ಗ್ರಾಮವು ವಾಸ್ತು ಶಿಲ್ಪದ ಪ್ರಮುಖ ನೆಲೆಯಾಗಿದೆ. ರಾಷ್ಟ್ರಕೂಟರ, ಕಲ್ಯಾಣ ಚಾಲುಕ್ಯರ, ಕಳಚೂರಿಗಳ, ಸೆವುಣರ ಶಾಸನಗಳಿಂದ ಇದು ಪ್ರಾಚೀನ ಗ್ರಾಮವಾಗಿತ್ತು ಎಂಬ ವಿಷಯ ತಿಳಿದುಬರುತ್ತದೆ. ತಾಲೂಕಿನಲ್ಲಿ ವಾಸ್ತು ಶಿಲ್ಪಕ್ಕೆ ಪ್ರಸಿದ್ಧವಾದ ಏಕಕೂಟ, ದ್ವಿಕೂಟ, ತ್ರಿಕೂಟ, ಪಂಚಕೂಟ ಶೈಲಿಯ ದೇವಾಲಯಗಳು ಈ ಗ್ರಾಮದಲ್ಲಿ ಕಂಡುಬರುತ್ತವೆ.

**೭. ಶ್ರೀ ಸಿದ್ಧಲಿಂಗೇಶ್ವರ ದೇವಾಲಯ**

| | | |
|---|---|---|
| ಸ್ಥಳ | : | ಸಿದ್ಧಲಿಂಗೇಶ್ವರ ದೇವಾಲಯ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೦-೧೧ನೇ ಶತಮಾನ. |
| ಬಳಸಿದ ಕಲ್ಲು | : | ಕಪ್ಪು ಶಿಲೆ. |
| ಸ್ಥಿತಿ | : | ಉತ್ತಮ |
| ಸಂರಕ್ಷಣೆ | : | ಇದೆ |

ಈ ದೇವಾಲಯವು ಸಿರವಾಳ ಗ್ರಾಮದ ಹಿಂದೆ ಪಶ್ಚಿಮ ದಿಕ್ಕಿನಲ್ಲಿದೆ. ಇದು ಪಂಚಕೂಟ ದೇವಾಲಯವಾಗಿದ್ದು, ಈ ದೇವಾಲಯದ ನಿರ್ಮಾಣದಲ್ಲಿ ಕಪ್ಪು ಶಿಲೆಯನ್ನು ಬಳಸಿದ್ದಾರೆ.

ಅಧಿಷ್ಠಾನವು ಉಪಾನ, ಜಗತಿ, ಕುಮುದ, ಪದ್ಮಗಳಿಂದ ಕೂಡಿದ್ದು ಅಲ್ಲಲ್ಲಿ ಕೆಲವು ಶಿಲ್ಪಗಳನ್ನು ಚಿತ್ರಿಸಿದ್ದಾರೆ. ಭಿತ್ತಿಯ ಗೋಡೆ ಮತ್ತು ಕಂಬಗಳಿಂದ ಕೂಡಿದ್ದು ಹೊರಭಾಗದಲ್ಲಿ ಅಲಂಕಾರಕವಾಗಿ ಕೆತ್ತಲಾಗಿಲ್ಲ. ಗ್ರೀವದ ಭಾಗದಿಂದ ದೇವಾಲಯವು ಜೀರ್ಣೋದ್ಧಾರಗೊಂಡಿದ್ದು

ಇತ್ತಿಚೀನ ದಿನಗಳಲ್ಲಿ ದೇವಾಲಯಕ್ಕೆ ಶಿಖರ ಸ್ತೂಪಿಯನ್ನು ನಿರ್ಮಿಸಿದ್ದಾರೆ.

ಮೂಲಗರ್ಭಗೃಹದ ಮಧ್ಯದಲ್ಲಿ ಶಿವಲಿಂಗ ಇದೆ. ಇದು ಸಿದ್ಧಲಿಂಗೇಶ್ವರನೆಂದು ಪೂಜಿಸಲ್ಪಡುತ್ತದೆ. ಗರ್ಭಗೃಹದಿಂದ ನಾಲ್ಕು ದಿಕ್ಕಿಗೂ ದ್ವಾರಗಳಿದ್ದು ಪ್ರತಿದ್ವಾರದಲ್ಲಿ ಅರ್ಧಮಂಟಪ, ಸಭಾಮಂಟಪ ಮತ್ತು ಗರ್ಭಗೃಹವನ್ನು ಹೊಂದಿದೆ.

ಸಿದ್ಧಲಿಂಗೇಶ್ವರ ದೇವಾಲಯದ ಮುಂದೆ ಸದ್ಯೋಜಾತ, ಹಿಂದೆ ತತ್ಪುರುಷ, ಎಡಕ್ಕೆ ವಾಮದೇವ, ಬಲಕ್ಕೆ ಅಘೋರ ಎಂಬ ಶಿವಲಿಂಗಗಳ ಗರ್ಭಗೃಹಗಳು ಕಂಡುಬರುತ್ತವೆ. ಪೂರ್ವದ್ದು ಬಾಳೆ ಹಳ್ಳಿ ಪೀಠ, ಉತ್ತರದ್ದು ಕೇದಾರ ಪೀಠ, ಪಶ್ಚಿಮದ್ದು ಉಜ್ಜನಿ ಪೀಠ, ದಕ್ಷಿಣದ್ದು ಶ್ರೀಶೈಲಪೀಠ, ಮಧ್ಯದ್ದು ಕಾಶಿ ಪೀಠಗಳೆಂದು ೬೬ ತಿಳಿಯುತ್ತವೆ ಪ್ರತಿ ಗರ್ಭಗೃಹದ ದ್ವಾರದಲ್ಲಿ ಗಜಲಕ್ಷ್ಮಿ, ಸರಸ್ವತಿ, ಗಣೇಶ, ಪಾರ್ವತಿಯ ಬಿಂಬಗಳನ್ನು ಒಳಗೊಂಡಿದೆ.

ಪೂರ್ವದ ದ್ವಾರದಲ್ಲಿ ಶಿವನ ೧೦ ನೃತ್ಯ ಭಂಗಿಗಳು, ಮತ್ತು ಗಜಲಕ್ಷ್ಮಿಯ ಬಿಂಬವನ್ನು ಕಾಣಬಹುದು. ಕೆಳಭಾಗದಲ್ಲಿ ಬ್ರಹ್ಮ ವಿಷ್ಣುವಿನ ಚಿತ್ರವಿದೆ. ಇದರ ಕೆಳಭಾಗದಲ್ಲಿ ಸೇವಕರಿದ್ದಾರೆ. ಹೂಬಳ್ಳಿಗಳಿಂದ ದ್ವಾರವನ್ನು ಅಲಂಕರಿಸಿದ್ದಾರೆ. ಆಯತಾಕಾರದ ಅರ್ಧಮಂಟಪವಿದೆ. ಮುಂದೆ ನವರಂಗ ಸಭಾಮಂಟಪವಿದೆ. ಇಲ್ಲಿ ರಾಮಾಯಣದ ದೃಶಾವಳಿಗಳನ್ನು ಚಿತ್ರಿಸಿದ್ದಾರೆ. ಇದು ತೆರೆದ ಸಬಾಮಂಟಪವಾಗಿದ್ದು ಸದ್ಯ ಗ್ರಿಲ್‌ಗಳಿಂದ ಮುಚ್ಚಿ, ಒಂದು ಪ್ರವೇಶ ದ್ವಾರವನ್ನು ಮಾಡಲಾಗಿದೆ. ಪಶ್ಚಿಮ ದ್ವಾರದಲ್ಲಿ ಲಕ್ಷ್ಮೀ ಬಿಂಬ ಇದ್ದು, ಶಿವನ ವಿವಿಧ ಭಂಗಿಗಳಲ್ಲಿ ತಲೆಬುರುಡೆಯನ್ನು ಹಾರವಾಗಿ ಹಾಕಿಕೊಂಡಿದ್ದು, ನೃತ್ಯ ಭಂಗಿಯು ನೋಡುಗರನ್ನು ಸೆಳೆಯುತ್ತದೆ. ಇದರ ಸುತ್ತಲೂ ಪಟ್ಟಿಕೆಗಳನ್ನು ಬಳ್ಳಿಗಳಿಂದ ಅಲಂಕರಿಸಲಾಗಿದೆ. ಉತ್ತರ ದಿಕ್ಕಿನಲ್ಲಿರುವ ದ್ವಾರದಲ್ಲಿ ಶ್ರೀಗಣೇಶ ಬಿಂಬದಿಂದ ಕೂಡಿದೆ. ಜೊತೆಗೆ ಸೇವಕರ ಶಿಲ್ಪಗಳಿದ್ದು ನಾಗರಶಿಲ್ಪ, ಡಮರುಗಳನ್ನು ಚಿತ್ರಿಸಲಾಗಿದೆ. ಸೌಂದರ್ಯಕ್ಕಾಗಿ ಬಳ್ಳಿಗಳಿಂದ ಅಲಂಕರಿಸಲಾಗಿದೆ. ದಕ್ಷಿಣ ದಿಕ್ಕಿನಲ್ಲಿರುವ ದ್ವಾರದಲ್ಲಿ ಸರಸ್ವತಿಯ ಬಿಂಬವು ಇದೆ. ಅಲ್ಲದೆ ಶಿವನ ಶಿಲ್ಪವಿದ್ದು ಕೆಳಗೆ ಪಾದದಲ್ಲಿ ಸೇವಕರಿದ್ದಾರೆ. ಡಮರು, ರುಂಡಮಾಲಿಕೆ, ನಾಗರ ಶಿಲ್ಪ, ಹೂ ಬಳ್ಳಿಗಳಿಂದ ಅಲಂಕೃತಗೊಂಡಿದೆ. ಸುತ್ತಲೂ ಪ್ರಾಂಗಣವಿದ್ದು ಪ್ರತಿ ತೆರೆದ ಸಭಾಮಂಟಪದ ಪ್ರವೇಶಕ್ಕಾಗಿ ಎರಡು ಕಡೆಗಳಲ್ಲಿ ದ್ವಾರಗಳು ಕಂಡುಬರುತ್ತವೆ. ಪ್ರತಿ ಪ್ರವೇಶದ ಮೆಟ್ಟಿಲುಗಳಲ್ಲಿ **"ಹಸ್ತಹಸ್ತಿ"**ಯನ್ನು ನೊಡಬಹುದು. ಸಭಾಮಂಟಪದಲ್ಲಿ ರಾಮಾಯಣ, ಮಹಾಭಾರತ, ಪಂಚತಂತ್ರ ಭಗವದ್ಗಿತೆಯ ಹಲವಾರು ಸನ್ನಿವೇಶಗಳನ್ನು ಚಿತ್ರಿಸಿದ್ದಾರೆ. ಭಿತ್ತಿಯಲ್ಲಿ ಜಾಲಂಧ್ರಗಳು ಕಂಡುಬರುತ್ತವೆ. ಪೂರ್ವದ ಸಭಾಮಂಟಪದಲ್ಲಿ ನಂದಿಯ ವಿಗ್ರಹವು ಇದೆ. ಪೂರ್ವದ ಸಭಾಮಂಟಪದ ಎಡಗಡೆಯ ಭಿತ್ತಿಯಲ್ಲಿ ಶಿವನ ಶಿಲ್ಪವೂ ಇದೆ.

ದೇವಾಲಯದ ಸ್ವಲ್ಪ ದೂರದಲ್ಲಿ ಬೃಹದಾಕಾರವಾದ ಪ್ರವೇಶ ದ್ವಾರವಿದ್ದು ಇದರ ಮಧ್ಯದಲ್ಲಿ ಅಡ್ಡಲಾಗಿ ಹಾಕಿರುವ ಕಲ್ಲೊಂದನ್ನು ಜನತೆ ಬಾಣತಿ ಹಾಕಿಸಿದ ಕಲ್ಲು ಎಂದು ಕರೆಯುತ್ತಾರೆ. ಈ ಬೃಹತ್ ಪ್ರವೇಶ ದ್ವಾರವು ಇತ್ತೀಚಿನ ದಿನಗಳಲ್ಲಿ ನಿರ್ಮಾಣವಾಗಿದೆ ಎಂದು ಹೇಳಬಹುದು. ದೇವಾಲಯದ ಹೊರಗಡೆ ಪುರಾತನ ಬಾವಿಯು ಕಂಡುಬರುತ್ತದೆ. ಅದನ್ನು ಹತ್ತಿ ಇಳಿಯಲು ಮೆಟ್ಟಿಲುಗಳು ಕಂಡುಬರುತ್ತವೆ. ಈ ದೇವಾಲಯದ ದಕ್ಷಿಣ ಸಭಾಮಂಟಪದಲ್ಲಿ ಯಾದವರ ಶಾಸನವನ್ನು ಗುರುತಿಸಬಹುದಾಗಿದೆ..

**೮. ನನ್ನಯ ದೇವಾಲಯ**

| | | |
|---|---|---|
| ಸ್ಥಳ | : | ನನ್ನಯ ದೇವಾಲಯ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪಶ್ಚಿಮಾಭಿಮುಖ. |
| ಕಾಲ | : | ಕ್ರಿ.ಶ. ೧೦–೧೧ನೇ ಶತಮಾನ. |
| ಬಳಸಿದ ಕಲ್ಲು | : | ಕೆಂಪು ಮರಳು ಮಿಶ್ರಿತ ಕಲ್ಲು ಮತ್ತು ಕಪ್ಪು ಶಿಲೆ. |
| ಸ್ಥಿತಿ | : | ಮಧ್ಯಮ |
| ಸಂರಕ್ಷಣೆ | : | ಇಲ್ಲ. |

ಈ ದೇವಾಲಯದ ಅಧಿಷ್ಠಾನವು ಕೆಂಪು ಮರಳು ಮಿಶ್ರಿತ ಕಲ್ಲಿನಿಂದ ನಿರ್ಮಾಣವಾಗಿದ್ದು ನಂತರದಲ್ಲಿ ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿದ್ದು ಕಂಡುಬರುತ್ತದೆ.

ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪವನ್ನು ಹೊಂದಿದ್ದು ಪಶ್ಚಿಮ, ಉತ್ತರ, ದಕ್ಷಿಣ ದಿಕ್ಕುಗಳಿಗೆ ದ್ವಾರಗಳನ್ನು ಹೊಂದಿದೆ. ಅಧಿಷ್ಠಾನವು ಉಪಾನ, ಜಗತಿ, ಪದ್ಮ, ಕುಮುದ, ವೃತ್ತ ಕಪೋತಗಳಿಂದ ಅಲಂಕೃತಗೊಂಡಿದ್ದು ಕುದುರೆ, ಆನೆ, ಹೂಬಳ್ಳಿಯ ಶಾರ್ದೂಲಗಳ ಸಾಲುಗಳನ್ನು ಕೆತ್ತಲಾಗಿದೆ. ದೇವಾಲಯದ ಭಿತ್ತಿಯಲ್ಲಿ ಮಿಥುನ, ನಾಗರಶಿಲ್ಪ, ಶಿವಪಾರ್ವತಿ ಶಿಲ್ಪಗಳಿದ್ದು ಸವು  ವಿವಿಧ ಭಂಗಿಗಳಿಂದ ಕೂಡಿದ್ದಾಗಿವೆ. ದೇವಾಲಯಕ್ಕೆ ಜಾಲಂಧ್ರಗಳಿವೆ. ಅಲ್ಲದೆ ಸಿಂಹ, ಮಹಿಷಾಸುರ ಮರ್ದಿನಿ, ಲಿಂಗಪೂಜೆಯಲ್ಲಿಯ ಮುನಿಗಳು, ಗಣೇಶ ಇತ್ಯಾದಿ ಉಬ್ಬುಶಿಲ್ಪಗಳನ್ನು ಭಿತ್ತಿಯಲ್ಲಿ ಚಿತ್ರಿಸಿದ್ದಾರೆ. ಹಾಗೆಯೇ ಗ್ರೀವದಲ್ಲಿ ಹೊರ ಚಾಚಿದ ಬೋದಿಗೆಗಳು ಇವರ ಸುಂದರ ಕಲಾನೈಪುಣ್ಯತೆಯನ್ನು ಸಾರುತ್ತವೆ. ಮೇಲೆ ಶಿಖರವಿದ್ದು ಸದ್ಯ ಅದು ನಾಶವಾಗಿದೆ. ಗರ್ಭಗೃಹವು ಭಿತ್ತಿಯ ಜೊತೆಗೆ ಗೋಡೆ ಮತ್ತು ಕಂಬಗಳಿಂದ ಕೂಡಿದೆ. ಸ್ತಂಭಗಳು ಅಲಂಕೃತಗೊಂಡಿದ್ದು, ಇವುಗಳಿಂದಾಗಿ ದೇವಾಲಯದ ಸೌಂದರ್ಯ ಹೆಚ್ಚು ಆಕರ್ಷಕವಾಗಿದೆ. ಮಧ್ಯದಲ್ಲಿ ಕಪ್ಪು ಶಿಲೆಯ ಶಿವಲಿಂಗ ಮನೋಜ್ಞವಾಗಿದೆ.

ಗರ್ಭಗೃಹದ ಪ್ರವೇಶ ದ್ವಾರದ ಮೇಲೆ ಗಜಲಕ್ಷ್ಮಿಯ ಬಿಂಬವು ಇದೆ. ಕೆಳಬಾಗದಲ್ಲಿ ದ್ವಾರಪಾಲಕರಿದ್ದು ಪಾರ್ವತಿಯ ವಿವಿಧ ಭಂಗಿಗಳು ದ್ವಾರದಲ್ಲಿ ಕಂಡುಬರುತ್ತದೆ. ಅಲಂಕಾರಕ್ಕಾಗಿ ಹೂ ಬಳ್ಳಿಯನ್ನು ಕೊರೆದಿದ್ದಾರೆ.

ಅರ್ಧಮಂಟಪವು ನಾಲ್ಕು ಕಂಬಗಳಿಂದ ಕೂಡಿದ್ದು ಅಲ್ಲಿ ಮತ್ಸಕನ್ಯೆಯರು ಹಾರುತ್ತಿರುವ ಗಂಧರ್ವ ಶಿಲ್ಪಗಳು ಕಂಡುಬರುತ್ತವೆ. ಸಭಾಮಂಟಪದಲ್ಲಿ ಪಂಚತಂತ್ರ ಮತ್ತು ಮಹಾಭಾರತದ ವಿವಿಧ ಉಬ್ಬುಶಿಲ್ಪಗಳನ್ನು ಚಿತ್ರಿಸಿದ್ದಾರೆ. ಪ್ರತಿ ದ್ವಾರದಲ್ಲಿ ಗಜಲಕ್ಷ್ಮಿ ಬಿಂಬವು ಸಾಮಾನ್ಯವಾಗಿದೆ. ಶಿಲೆಗಳಲ್ಲಿ ಆಲಂಕಾರಿಕ ದೃಷ್ಟಿಯಿಂದ ಇವು ಅಂದಿನ ಶಿಲ್ಪಗಳ ಕಲಾವೈಭವವನ್ನು ಎತ್ತಿ ತೋರಿಸುತ್ತವೆ. ಆದರೆ ಸದ್ಯ ಈ ದೇಗುಲವು ಸಾಧು ಸಂತರು ವಾಸ ಮಾಡುವ ತಾಣವಾಗಿದೆ ಎಂದು ಹೇಳಬಹುದಾಗಿದೆ.

**೯. ನಾಗಯ್ಯ ದೇವಾಲಯ**

| | | |
|---|---|---|
| ಸ್ಥಳ | : | ನಾಗಯ್ಯ ದೇವಾಲಯ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪಶ್ಚಿಮಾಭಿಮುಖ. |
| ಕಾಲ | : | ಕ್ರಿ.ಶ. ೧೦–೧೧ನೇ ಶತಮಾನ. |
| ಬಳಸಿದ ಕಲ್ಲು | : | ಕೆಂಪು ಮರಳು ಮಿಶ್ರಿತ ಕಲ್ಲು ಮತ್ತು ಗ್ರಾನೈಟ್, ಕಪ್ಪು ಶಿಲೆ. |
| ಸ್ಥಿತಿ | : | ಮಧ್ಯಮ |
| ಸಂರಕ್ಷಣೆ | : | ಇಲ್ಲ. |

ಈ ದೇವಾಲಯದ ಅಧಿಷ್ಠಾನವು ಕೆಂಪು ಮರಳು ಮಿಶ್ರಿತ ಕಲ್ಲಿನಿಂದ ನಿರ್ಮಾಣವಾಗಿದ್ದು ನಂತರದಲ್ಲಿ ಗ್ರಾನೈಟ್, ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿದ್ದು ಕಂಡುಬರುತ್ತದೆ.

ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪವನ್ನು ಹೊಂದಿದ್ದು ಪಶ್ಚಿಮ, ಉತ್ತರ, ದಕ್ಷಿಣ ದಿಕ್ಕುಗಳಿಗೆ ದ್ವಾರಗಳನ್ನು ಹೊಂದಿದೆ. ಅಧಿಷ್ಠಾನವು ಉಪಾನ, ಜಗತಿ, ಪದ್ಮ ಕುಮುದ, ವೃತ್ತ ಕಪೋತಗಳಿಂದ ಅಲಂಕೃತಗೊಂಡಿದ್ದು, ಅಲಂಕಾರಕ್ಕಾಗಿ ಕೆತ್ತಿರುವ ಕುದುರೆ, ಆನೆ, ಹೂಬಳ್ಳಿಯ ಶಾರ್ದೂಲಗಳ ಸಾಲುಗಳು ಆಕರ್ಷಕವಾಗಿವೆ. ದೇವಾಲಯದ ಭಿತ್ತಿಯಲ್ಲಿ ಮಿಥುನ, ನಾಗರಶಿಲ್ಪ, ಶಿವಪಾರ್ವತಿಯರ ಶಿಲ್ಪವಿದ್ದು ಅವು ವಿವಿಧ ಭಂಗಿಗಳಿಂದ ಕೂಡಿದ್ದಾಗಿವೆ. ದೇವಾಲಯಕ್ಕೆ ಜಾಲಂಧ್ರಗಳಿವೆ. ಅಲ್ಲದೆ ಸಿಂಹ, ಮಹಿಷಾಸುರ ಮರ್ದಿನಿ, ಲಿಂಗಪೂಜೆಯಲ್ಲಿಯ ಮುನಿಗಳು, ಗಣೇಶ ಇತ್ಯಾದಿ

ಉಬ್ಬುಶಿಲ್ಪಗಳನ್ನು ಭಿತ್ತಿಯಲ್ಲಿ ಚಿತ್ರಿಸಿದ್ದಾರೆ. ಗ್ರೀವದಲ್ಲಿ ಹೊರಚಾಚಿದ ಬೋದಿಗೆಗಳು ಇದ್ದು ಸುಂದರ ಕಲಾನೈಪುಣ್ಯತೆಯನ್ನು ಸಾರುತ್ತವೆ. ಮೇಲೆ ಶಿಖರವಿದ್ದು ಸದ್ಯ ಅದು ನಾಶವಾಗಿದೆ. ಗರ್ಭಗೃಹವು ಭಿತ್ತಿಯ ಜೊತೆಗೆ ಗೋಡೆ ಮತ್ತು ಕಂಬಗಳಿಂದ ಕೂಡಿದೆ. ಸ್ತಂಭಗಳು ಅಲಂಕೃತಗೊಂಡಿವೆ. ಇವುಗಳಿಂದಾಗಿ ದೇವಾಲಯದ ಸೌಂದರ್ಯ ಹೆಚ್ಚು ಆಕರ್ಷಕವಾಗಿದೆ. ಮಧ್ಯದಲ್ಲಿ ಕಪ್ಪು ಶಿಲೆಯ ಶಿವಲಿಂಗ ಮನಸೂರೆಗೊಳ್ಳುತ್ತದೆ ಗರ್ಭಗೃಹದ ಪ್ರವೇಶ ದ್ವಾರದ ಮೇಲೆ ಗಜಲಕ್ಷ್ಮಿಯ ಲಲಾಟ ಬಿಂಬವು ಇದೆ. ಕೆಳಭಾಗದಲ್ಲಿ ದ್ವಾರಪಾಲಕರಿದುದ್ದನ್ನು ಕಾಣಬಹುದು. ಹಾಗೆಯೇ ಅಲಂಕಾರಕ್ಕಾಗಿ ಹೂ ಬಳ್ಳಿಯನ್ನು ಕೊರೆದಿದ್ದಾರೆ.

ಅರ್ಧಮಂಟಪವು ನಾಲ್ಕು ಕಂಬಗಳಿಂದ ಕೂಡಿದ್ದು ಅಲ್ಲಿ ಮತ್ಸ್ಯಕನ್ಯೆಯರು ಹಾರುತ್ತಿರುವ ಗಂಧರ್ವ ಶಿಲ್ಪಗಳು ಕಂಡುಬರುತ್ತವೆ. ಸಭಾಮಂಟಪದಲ್ಲಿ ಪಂಚತಂತ್ರ ಮತ್ತು ಮಹಾಭಾರತದ ವಿವಿಧ ರೀತಿಯ ಉಬ್ಬುಶಿಲ್ಪಗಳನ್ನು ಕಾಣಬಹುದಾಗಿದೆ. ಪ್ರತಿ ದ್ವಾರದಲ್ಲಿ ಗಜಲಕ್ಷ್ಮಿ ಬಿಂಬವು ಸಾಮಾನ್ಯವಾಗಿದೆ. ಪ್ರತಿ ಗರ್ಭಗೃಹ, ಅಂತರಾಳ, ಸಭಾಮಂಟಪಗಳಲ್ಲಿ ಸುತ್ತಲೂ ವಾತಾಲಯಗಳನ್ನು ನಿರ್ಮಿಸಿದ್ದಾರೆ. ಶಿವ, ಪಾರ್ವತಿ, ಮಿಥುನ, ನಾಗರಶಿಲ್ಪಗಳಿಂದ ಜಾಲಂಧ್ರಗಳು ಆಕರ್ಷಿಸುತ್ತವೆ. ಶಿಲೆಗಳಲ್ಲಿ ಆಲಂಕಾರಿಕ ದೃಷ್ಟಿಯಿಂದ ಇವು ಅಂದಿನ ಶಿಲ್ಪಗಳ ಕಲಾವೈಭವವನ್ನು ಎತ್ತಿ ತೋರಿಸುತ್ತದೆ. ಆದರೆ ಸದ್ಯ ಈ ದೇಗುಲವು ಪ್ರಾಣಿಗಳ ಅಡಗುತಾಣವಾಗಿದ್ದು, ಜೊತೆಗೆ ಸಾಧು ಸಂತರ ವಾಸದ ಮನೆಗಳಾಗಿವೆ.

**೧೦. ಸುಜ್ಞಾನೇಶ್ವರ ದೇವಾಲಯ**

| | | |
|---|---|---|
| ಸ್ಥಳ | : | ಸುಜ್ಞಾನೇಶ್ವರ ದೇವಾಲಯ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪಶ್ಚಿಮಾಭಿಮುಖ. |
| ಕಾಲ | : | ಕ್ರಿ.ಶ. ೧೦–೧೧ನೇ ಶತಮಾನ. |
| ಸ್ಥಿತಿ | : | ಮಧ್ಯಮ. |
| ಸಂರಕ್ಷಣೆ | : | ಇದೆ. |

ಈ ದೇವಾಲಯವು ಕೆಂಪು ಮರಳು ಮಿಶ್ರಿತ ಕಲ್ಲಿನಿಂದ ನಿರ್ಮಾಣವಾಗಿದ್ದು ೨ ಗರ್ಭಗೃಹ ಸಭಾಮಂಟಪವನ್ನು ಹೊಂದಿದೆ. ಇದು ಪೂರ್ವ, ಪಶ್ಚಿಮ ದಿಕ್ಕುಗಳಲ್ಲಿ ಗರ್ಭಗೃಹವನ್ನು ಹೊಂದಿದೆ. ಸಭಾಮಂಟಪವು ಉತ್ತರ ದಿಕ್ಕಿಗಿದ್ದು ಅದು ತೆರೆದ ಮಂಟಪವಾಗಿದೆ. ಗರ್ಭಗೃಹವು ಪೂರ್ವ–ಪಶ್ಚಿಮ ದಿಕ್ಕಿನಲ್ಲಿ ದ್ವಾರಗಳನ್ನು ಹೊಂದಿದೆ. ಅಧಿಷ್ಠಾನವು ಉಪಾನ, ಜಗತಿ, ಪದ್ಮ, ಕುಮುದ, ವೃತ್ತ ಕಪೋತಾದಿಗಳಿಂದ

ಅಲಂಕೃತಗೊಂಡಿದ್ದು, ಅಲಂಕಾರಕ್ಕಾಗಿ ಹೂಬಳ್ಳಿಯ ಶಾರ್ದೂಲಗಳ ಸಾಲುಗಳು ಆಕರ್ಷಕವಾಗಿದೆ. ದೇವಾಲಯವು ಸಂಪೂರ್ಣವಾಗಿ ಪುನರ್ ನಿರ್ಮಾಣಗೊಂಡಿದ್ದು ಕೆಲವು ಭಾಗಗಳನ್ನು ಮಾತ್ರ ನೋಡಲು ದೊರೆಯುತ್ತದೆ. ಗ್ರೀವದಲ್ಲಿ ಹೊರಚಾಚಿದ ಬೋದಿಗೆಗಳು ಇವೆ. ಇವು ಸುಂದರ ಕಲಾ ನೈಪುಣ್ಯತೆಯನ್ನು ಸಾರುತ್ತವೆ. ಮೇಲೆ ಶಿಖರವಿದ್ದು ಸದ್ಯ ಅದು ನಾಶವಾಗಿದೆ. ಗರ್ಭಗೃಹವು ಭಿತ್ತಿಯ ಜೊತೆಗೆ ಗೋಡೆ ಮತ್ತು ಕಂಬಗಳಿಂದ ಕೂಡಿದ್ದು ಸ್ತಂಭಗಳು ಅಲಂಕೃತಗೊಂಡಿವೆ. ಈಗ ಗರ್ಭಗೃಹದಲ್ಲಿ ಯಾವುದೋ ಸಮಾಧಿಯ ಕಟ್ಟೆಯು ಕಂಡುಬರುತ್ತದೆ. ಈ ದೇವಾಲಯದ ಪಕ್ಕದಲ್ಲಿ ಸುಂದರವಾಗಿ ಸೇದಿಕಲ್ಲಿನಿಂದ ನಿರ್ಮಿಸಿರುವ ಬಾವಿ ಇದ್ದು, ಅದನ್ನು ಹತ್ತಿ ಇಳಿಯಲು ಮೆಟ್ಟಿಲುಗಳಿವೆ. ಇಲ್ಲಿ ರಾಮಾಯಣ ಮತ್ತು ಮಹಾಭಾರತ, ಪಂಚತಂತ್ರ, ಭಗವದ್ಗಿತೆಯ ದೃಶ್ಯಾವಳಿಗಳನ್ನು ಚಿತ್ರಿಸಿದ್ದಾರೆ.

ಈ ಬಾವಿಯು ಪ್ರಾರಂಭದಲ್ಲಿ ದೇವಾಲಯದ ಪುಷ್ಕರಿಣಿಯಾಗಿದ್ದು ನಂತರ ದೇವಾಲಯದ ಜೀರ್ಣೋದ್ಧಾರದಿಂದಾಗಿ ಪ್ರತ್ಯೇಕವಾಗಿದೆ.[೭೭]

**೧೧. ಕುಂಬಾರ ದೇವಾಲಯ(ದೇಗುಲ)**

| | | |
|---|---|---|
| ಗ್ರಾಮ | : | ಸಿರವಾಳ. |
| ಸ್ಥಳ | : | ಕುಂಬಾರ ದೇವಾಲಯ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೧ನೇ ಶತಮಾನ. |
| ಬಳಸಿದ ಕಲ್ಲು | : | ಸೇದಿಕಲ್ಲು ಮತ್ತು ಕೆಂಪು ಮರಳು ಮಿಶ್ರಿತ ಕಲ್ಲು. |
| ಸ್ಥಿತಿ | : | ಶಿಥಿಲಾವಸ್ಥೆ. |
| ಸಂರಕ್ಷಣೆ | : | ಇಲ್ಲ. |

ಕೆಂಪು ಮರಳು ಮಿಶ್ರಿತ ಶಿಲೆಯಿಂದ ರಚಿಸಿರುವ ಈ ದೇವಾಲಯದ ಗರ್ಭಗೃಹವು ಸಂಪೂರ್ಣವಾಗಿ ಶಿಥಿಲಗೊಡಿದ್ದು, ಅಂತರಾಳ, ಸಭಾಮಂಟಪವು ಶಿಥಿಲಾವಸ್ಥೆಯನ್ನು ತಲುಪಿವೆ. ಸುತ್ತಲೂ ವಾಸದ ಮನೆಗಳಿಂದ ಕೂಡಿರುವುದರಿಂದ ಇದರ ಸೌಂದರ್ಯ ಹಾಳಾಗಿದೆ.

ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪವನ್ನು ಹೊಂದಿದ್ದು, ಈ ದೇವಾಲಯ ಪೂರ್ವಾಭಿಮುಖವಾಗಿದೆ. ಪೂರ್ವ, ದಕ್ಷಿಣ ದಿಕ್ಕಿನಲ್ಲಿ ಪ್ರವೇಶ ದ್ವಾರಗಳಿವೆ. ಗರ್ಭಗೃಹದ ಗೋಡೆಯು ಚೌಕಾಕಾರದ ಕಂಬಗಳಿಂದ ಕೂಡಿದ್ದು, ಸುತ್ತಲೂ ವಾತಾಲಯಗಳನ್ನು ಹೊಂದಿದೆ. ಉತ್ತರಾಭಿಮುಖವಾಗಿ ಜಲಪ್ರಣಾಳಿಯು ಇದೆ. ಮಧ್ಯದಲ್ಲಿ ಶಿವಲಿಂಗವಿದ್ದು

ಆಕರ್ಷಕವಾಗಿದೆ. ಸಭಾಮಂಟಪದಲ್ಲಿ ನಂದಿ ವಿಗ್ರಹ ಕಂಡುಬರುತ್ತದೆ.

'ಸದ್ಯ ಈ ದೇಗುಲವನ್ನು ಸ್ಥಳೀಯರು ತಮ್ಮ ಸ್ವಂತ ಉಪಯೋಗಗಳಿಗಾಗಿ ಬಳಸುತ್ತಿದ್ದಾರೆ.'

### ೧೨. ಕದಂಬೇಶ್ವರ ದೇವಾಲಯ

| | | |
|---|---|---|
| ಗ್ರಾಮ | : | ಸಿರವಾಳ. |
| ಸ್ಥಳ | : | ಕದಂಬೇಶ್ವರ ದೇವಾಲಯ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೧ನೇ ಶತಮಾನ. |
| ಬಳಸಿದ ಕಲ್ಲು | : | ಕೆಂಪು ಮರಳು ಮಿಶ್ರಿತ ಕಲ್ಲು. |
| ಸ್ಥಿತಿ | : | ಶಿಥಿಲಾವಸ್ಥೆ. |
| ಸಂರಕ್ಷಣೆ | : | ಇಲ್ಲ. |

ಸಿರವಾಳ ಗ್ರಾಮದಲ್ಲಿರುವ ಕದಂಬೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದ್ದು, ಈ ದೇವಾಲಯ ಗರ್ಭಗೃಹ, ಅಂತರಾಳ, ಸಭಾಮಂಟಪವನ್ನು ಹೊಂದಿದೆ. ಅಧಿಷ್ಠಾನವು ಉಪಾನ, ಜಗತಿ, ಕುಮುದ, ಕಪೋತ ಭಾಗಗಳಿಂದ ಆವೃತಗೊಂಡಿದ್ದು, ಭಿತ್ತಿಯು ಕಂಬಗಳಿದ ಕೂಡಿದ್ದು, ಇಲ್ಲಿ ಉಬ್ಬುಶಿಲ್ಪಗಳನ್ನು ಕಾಣಬಹುದಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಉತ್ತರ ಭಾಗದಲ್ಲಿ ಜಲಪ್ರಣಾಳಿಕೆ ಇದೆ. ದ್ವಾರದಲ್ಲಿ ದ್ವಾರಪಾಲಕರಿದ್ದು ಅವರು ಕೈಗಳಲ್ಲಿ ಶಂಖ ಗದೆಗಳನ್ನು ಹೊಂದಿದ್ದಾರೆ.

ಅಂತರಾಳವು ಉದ್ದವಾಗಿದ್ದು ಉತ್ತರದಲ್ಲಿ ಮಹಿಷಾಸುರ ಮರ್ದಿನಿ ದಕ್ಷಿಣದಲ್ಲಿ ಗಣೇಶನ ಶಿಲ್ಪಗಳಿವೆ. ಈ ಅಂತರಾಳದ ಕೊನೆಯಲ್ಲಿ ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ಪ್ರವೇಶ ದ್ವಾರಗಳಿವೆ. ದ್ವಾರಗಳ ಮುಂದೆ ಸಭಾಮಂಟಪವಿದ್ದು ಅಲ್ಲಿ ಶಾಸನವಿದೆ (ಸದ್ಯ ಈ ಶಾಸನವನ್ನು ಗುಲಬರ್ಗಾ ವಸ್ತು ಸಂಗ್ರಹಾಲಯದಲ್ಲಿರಿಸಲಾಗಿದೆ). ಅದು ಸೂರ್ಯಗ್ರಹಣದ ಸಂದರ್ಭದಲ್ಲಿ ದೇವಾಲಯದ ಜೀರ್ಣೋದ್ಧಾರಕ್ಕಾಗಿ ಭೂಮಿಯನ್ನು ದಾನವಾಗಿ ನೀಡಿದ್ದನ್ನು ವಿವರಿಸುತ್ತದೆ. ಸಭಾಮಂಟಪದಲ್ಲಿ ಎರಡು ವಾತಾಲಯಗಳಿದ್ದು ಪೂರ್ವದಲ್ಲಿ ಪ್ರವೇಶ ದ್ವಾರವಿದೆ. ಈ ಸಭಾಮಂಟಪದಲ್ಲಿ ಪಂಚತಂತ್ರದ ಕಥೆಯನ್ನು ಹೇಳುವ ಉಬ್ಬುಶಿಲ್ಪಗಳು ಗಣೇಶ ಮತ್ತು ಲಕ್ಷ್ಮಿಯ ಶಿಲ್ಪಗಳನ್ನು ಗುರುತಿಸಬಹುದಾಗಿದೆ.

### ೧೩. ಮಲ್ಲಿಕಾರ್ಜುನ ದೇವಾಲಯ

| | | |
|---|---|---|
| ಗ್ರಾಮ | : | ಸಿರವಾಳ. |
| ಸ್ಥಳ | : | ಮಲ್ಲಿಕಾರ್ಜುನ ದೇವಾಲಯ. |
| ಶೈಲಿ | : | ಚೋಳರ ಶೈಲಿಯನ್ನು ಹೊಲುತ್ತದೆ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೧ನೇ ಶತಮಾನ. |
| ಸ್ಥಿತಿ | : | ಉತ್ತಮ. |
| ಸಂರಕ್ಷಣೆ | : | ಇದೆ. |

ಗ್ರಾಮದಲ್ಲಿರುವ ಮಲ್ಲಿಕಾರ್ಜುನ ದೇವಾಲಯವು ನಿತ್ಯವೂ ಪೂಜಿಸಲ್ಪಡುತ್ತಿದ್ದು, ಈ ದೇವಾಲಯವು ಪೂರ್ವಾಭಿಮುಖವಾಗಿದೆ. ದೇವಾಲಯಕ್ಕೆ ಉಪಪೀಠದಿಂದ ಕೂಡಿದ ಅಧಿಷ್ಠಾನವಿದೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪವನ್ನು ಹೊಂದಿದ್ದು, ಚೋಳರ ಶೈಲಿಯನ್ನು ಹೋಲುತ್ತದೆ. ಉಪಪೀಠವು ಉಪಾನ, ಜಗತಿಯಿಂದ ಕೂಡಿದ್ದು ಅಧಿಷ್ಠಾನವು ಉಪಾನ, ಜಗತಿ, ತ್ರಿಪಟ್ಟ, ಕುಮುದ, ಕಪೋತ, ಕಂಪ ಅಂಗಗಳನ್ನು ಒಳಗೊಂಡಿದೆ. ಚೌಕಾಕಾರದ ಕಂಬಗಳಿದ ಆವೃತಗೊಂಡಿದ್ದು, ಬಳ್ಳಿಯ ಸುರುಳಿ, ಸಿಂಹಗಳು, ಹಂಸ, ಆನೆ, ಮನುಷ್ಯ, ನರಸಿಂಹ ಮತ್ತು ಹಿರಣ್ಯ ಕಶಪುವಿನ ಜಗಳವಾಡುವ ದೃಶ್ಯಗಳನ್ನು, ಮತ್ತು ಶಿವ ಪಾರ್ವತಿಯರ ಸೂರ್ಯ, ಚಂದ್ರ, ರತಿಮನ್ಮಥರ, ನೃತ್ಯಗಾರ ಮತ್ತು ಗಣೇಶ, ಮಹಿಷಾಸುರ ಮರ್ದಿನಿಯ ಶಿಲ್ಪಗಳನ್ನು ಚಿತ್ರಿಸಿದ್ದಾರೆ. ಭಿತ್ತಿಯಲ್ಲಿ ಜಲಪ್ರಣಾಳಿಗಳು ಇದ್ದು ಅವು ಉತ್ತರಕ್ಕೆ ೩ ದಕ್ಷಿಣಕ್ಕೆ ೩ ಇವೆ. ಅಲ್ಲಲ್ಲಿ ಗೋಡೆಗಳನ್ನು ಹೂಗಳಿಂದ ಅಲಂಕರಿಸಲಾಗಿದೆ.

ಗರ್ಭಗೃಹದಲ್ಲಿ ೩ ವಾತಾಲಯಗಳು ಇದ್ದು, ಅವುಗಳು ಕಟ್ಟೆಗೆಗಳಿಂದ ಕೂಡಿವೆ. ದ್ವಾರದಲ್ಲಿ ದ್ವಾರಪಾಲಕರನ್ನು ಕೆತ್ತಲಾಗಿದೆ. ಇಲ್ಲಿ ಗದೆ, ನಾಗರಶಿಲ್ಪಗಳು ಇವೆ. ಮೇಲ್ಭಾಗದಲ್ಲಿ ಗಜಲಕ್ಷ್ಮಿ ಬಿಂಬವಿದ್ದು,. ಸುತ್ತಲೂ ಹೂಬಳ್ಳಿಗಳಿಂದ ಆವರಿಸಿದೆ. ಸಭಾ ಮಂಟಪದಲ್ಲಿ ಪೂರ್ವಕ್ಕೆ ಅರ್ಧಮಂಟಪವಿದ್ದು ಅದಕ್ಕೆ ಉತ್ತರ-ದಕ್ಷಿಣ ದಿಕ್ಕುಗಳಲ್ಲಿ ದ್ವಾರಗಳಿದ್ದು, ಈ ದ್ವಾರಗಳು ಹೂಬಳ್ಳಿಗಳಿಂದ ಅಲಂಕೃತಗೊಂಡಿವೆ.

ಪೀಠದ ಮೇಲಿನ ಕಪ್ಪು ಶಿಲೆಯ ಶಿವಲಿಂಗವು ಆಕರ್ಷಕವಾಗಿದ್ದು, ಗರ್ಭಗೃಹದ ದ್ವಾರವು ಮಾನವನ ವಿವಿಧ ಭಂಗಿಗಳನ್ನು ಆವೃತಗೊಂಡಿದ್ದು, ಮೇಲ್ಭಾಗದಲ್ಲಿ ಗಜಲಕ್ಷ್ಮಿ ಬಿಂಬವಿದೆ. ಸುತ್ತಲೂ ಹೂಬಳ್ಳಿಗಳಿಂದ ಅಲಂಕರಿಸಿದ್ದಾರೆ. ಅಂತರಾಳದಲ್ಲಿ ಆನೆ, ಸಿಂಹ, ಗಣೇಶ, ಮಹಿಷಾಸುರ ಮರ್ದಿನಿ, ಶಿಲ್ಪಗಳು ಕಂಡುಬರುತ್ತವೆ. ಸಭಾಮಂಟಪವು ಚಚ್ಚೌಕಾಕಾರದ ಕಂಬಗಳಿಂದ ಆವೃತಗೊಂಡಿದ್ದು, ಈ ಕಂಬಗಳು ಯುದ್ಧದ ಸನ್ನಿವೇಶಗಳನ್ನು, ನೃತ್ಯಗಾರರು

ಬಳಸುವ ವಾದ್ಯಗಳ ಸಲಕರಣೆಗಳನ್ನು ಕೆತ್ತಲಾಗಿದೆ. ಶಿವ ಪಾರ್ವತಿ ನೃತ್ಯ ಶಿಲ್ಪಗಳನ್ನು ಕೆತ್ತಲಾಗಿದೆ. ಮಧ್ಯದಲ್ಲಿ ೮ ದಳಗಳಿಂದ ಕೂಡಿದ ಕಮಲದ ಹೂವಿನ ಎಸಳುಗಳು ಇಲ್ಲಿ ಕಂಡುಬರುತ್ತವೆ.

ಅಲ್ಲದೆ ಅಷ್ಟದಿಕ್ಪಾಲಕರಾದ

ಇಂದ್ರ – ಆನೆಯ ಮೇಲೆ.

ರಾಮ – ಅಗ್ನಿಯ ಮೇಲೆ.

ಯಮ – ಕೋಣನ ಮೇಲೆ.

ವರುಣ – ಮಕರದ ಮೇಲೆ.

ವಾಯು – ಕುದುರೆಯ ಮೇಲೆ.

ಕುಬೇರ – ಕುರಿಯ ಮೇಲೆ.

ಈಶ್ವರ – ನಂದಿಯ ಮೇಲೆ.

ನಿಋತಿ – ಮಾನವನ ಮೇಲೆ. ೭೮ ಅವರ ವಾಹನಗಳೊಂದಿಗೆ ಚಿತ್ರಿಸಿದ್ದು, ಇವು ದೇವಾಲಯದ ಸೌಂದರ್ಯವನ್ನು ಹೆಚ್ಚಿಸಿವೆ.

## ೪.೨ ವೈಷ್ಣವ ದೇವಾಲಯಗಳು

### ೧. ಭೀಮರಾಯನಗುಡಿ

| | | |
|---|---|---|
| ಗ್ರಾಮ | : | ಭೀಮರಾಯನಗುಡಿ. |
| ಸ್ಥಳ | : | ಬಲಭಿಮೇಶ್ವರ ದೇವಾಲಯ. |
| ಶೈಲಿ | : | ರಾಷ್ಟ್ರಕೂಟ. |
| ಅಭಿಮುಖ | : | ದಕ್ಷಿಣಾಭಿಮುಖ |
| ಕಾಲ | : | ಕ್ರಿ.ಶ. ೧೧–೧೨ನೇ ಶತಮಾನ. |
| ಬಳಿಸಿದ ಕಲ್ಲು | : | ಕೆಂಪು ಮರಳು ಮಿಶ್ರಿತ ಕಲ್ಲು. |
| ಸ್ಥಿತಿ | : | ಜೀರ್ಣೋದ್ಧಾರಗೊಳಿಸಲಾಗಿದೆ. (ಉತ್ತಮ) |
| ಸಂರಕ್ಷಣೆ | : | ಇದೆ. |

ಈ ದೇವಾಲಯವು ಗರ್ಭಗೃಹ ಮತ್ತು ಮುಖಮಂಟಪದಿಂದ ಕೂಡಿದ್ದು, ಗರ್ಭಗೃಹದಲ್ಲಿ ಮೂಲವಿಗ್ರಹ ಹನುಮಂತನ ವಿಗ್ರಹವಾಗಿದೆ. ಗರ್ಭಗೃಹದ ದ್ವಾರದಲ್ಲಿ ಗಜಲಕ್ಷ್ಮಿಯ ಲಲಾಟ ಬಿಂಬವಿದೆ. ಕೆಳಗೆ ಶೈವ ದೇವಾಲಯದ ದ್ವಾರಪಾಲಕರಾದ ಶಂಖನಿಧಿ–

ಪದ್ಮನಿಧಿಯರನ್ನು ಕಾಣಬಹುದು. ತೆರೆದ ಮುಖಮಂಟಪದಲ್ಲಿ ಕಪ್ಪು ಶಿಲೆಯಿಂದ ಕೆತ್ತಲಾಗಿರುವ ರಾಷ್ಟ್ರಕೂಟರ ಕಾಲದ ರುದ್ರಕಾಂತ ಸಿಂಹ ಪಾದಗಳು ಮನೋಜ್ಞವಾಗಿದೆ. ಇದಲ್ಲದೆ ಕಂಬದ ಪೀಠದಲ್ಲಿ ಶಂಖ, ಚಕ್ರ, ಗದೆ, ವಿಷ್ಣು, ಸೂರ್ಯ, ತ್ರಿವಿಕ್ರಮ ವಿಗ್ರಹಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ.[೭೯] ಈ ದೇವಾಲಯದ ಸುತ್ತಲೂ ವಿಶಾಲವಾದ ಸ್ಥಳವಿದ್ದು, ಈ ಸ್ಥಳದಲ್ಲಿ ಸಾಲು ಮಂಟಪಗಳಿವೆ.

ರಾಷ್ಟ್ರಕೂಟರ ಶೈಲಿಯಲ್ಲಿ ನಿರ್ಮಾಣವಾಗಿರುವ ತೆರೆದ ಮಂಟಪಗಳು ಇಲ್ಲಿ ಕಂಡುಬರುತ್ತವೆ. ಈ ಮಂಟಪಗಳಲ್ಲಿ ಕೆಲವನ್ನು ಭಕ್ತಾದಿಗಳ ವಸತಿಗಾಗಿ, ಇನ್ನೂ ಕೆಲವನ್ನು ಅಡುಗೆ ಮನೆಗಳನ್ನಾಗಿ ಬಳಸುತ್ತಿದ್ದಾರೆ. ದೇವಾಲಯದ ಮುಂದೆ ದೀಪಸ್ತಂಭ ಇದ್ದು, ಈ ಪ್ರದೇಶವನ್ನು ಹಿಂದೆ ಅಮಲಾಪುರವೆಂದು ಕರೆಯುತ್ತಿದ್ದರು. ಈ ಸುತ್ತಮುತ್ತಲ ಪ್ರದೇಶದಲ್ಲಿ ಆರಾಧ್ಯ ದೈವವಾಗಿರುವ ಭೀಮರಾಯ, ಬಲಭೀಮ, ಅಂಬ್ಲಯ್ಯ, ಅಂಬ್ಲಪ್ಪಮುತ್ಯ ಎಂದು ಕರೆಯುವ ಪ್ರಸಿದ್ಧ ದೇವರಾಗಿದ್ದಾನೆ. ಪ್ರತಿ ವರ್ಷ ಸಂಕ್ರಾಂತಿಯಂದು ಇಲ್ಲಿ ಜಾತ್ರೆಯೂ ಜರುಗುತ್ತದೆ. ಈ ದೇವಾಲಯದ ಪ್ರವೇಶ ದ್ವಾರದ ಬಲಗೊಡೆಯಲ್ಲಿ ಕಟ್ಟುಕಲ್ಲನ್ನಾಗಿ ಬಳಸಿರುವ ಚಾಲುಕ್ಯರ ಶಾಸನವು ಇದ್ದು, ಅದು ಮಾಂಡಳಿಕ ರೇವರಸನನ್ನು ಸೋಮೇಶ್ವರ ದೇವರಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ.

ಸದ್ಯ ಕೃಷ್ಣಾ ಮೇಲ್ದಂಡೆ ಯೋಜನೆಯು ಜಾರಿಯಾದ ಸಂದರ್ಭದಲ್ಲಿ ಇಲ್ಲಿ ಯೋಜನೆಯ ಕೇಂದ್ರ ಕಛೇರಿಯನ್ನು ಸ್ಥಾಪಿಸಿದ್ದಾರೆ. ಇದರಿಂದಾಗಿ ದೇವಾಲಯದ ಸುತ್ತ ಮುತ್ತಲ ಪ್ರದೇಶದಲ್ಲಿ ನೌಕರರ ವಸತಿ ಗೃಹಗಳನ್ನು ನಿರ್ಮಿಸಿದ್ದಾರೆ. ಮೇಲ್ದಂಡೆ ಯೋಜನೆಯ ಕೇಂದ್ರ ಕಛೇರಿಯಿಂದಾಗಿ ಈ ಪ್ರದೇಶವು ಪ್ರಖ್ಯಾತಿಯನ್ನು ಪಡೆದುಕೊಂಡಿದೆ.

'ಪ್ರಾರಂಭದಲ್ಲಿ ಶೈವ ದೇವಾಲಯವಾಗಿದ್ದು ನಂತರ ಚಾಲುಕ್ಯರ ಕಾಲಾವಧಿಯಲ್ಲಿ ವೈಷ್ಣವ ದೇವಾಲಯವಾಗಿ ಮಾರ್ಪಟ್ಟಿದೆ.'

## ೪.೩ ಜೈನ ದೇವಾಲಯಗಳು

### ೧. ಗೋಗಿಯ ಪಾರ್ಶ್ವನಾಥ ಮಂದಿರ

ಗ್ರಾಮದ ಮಧ್ಯದಲ್ಲಿರುವ ಶ್ರೀ ಪಾರ್ಶ್ವನಾಥನ ಜಿನಾಲಯವು ೧೧ನೆಯ ಶತಮಾನದ ಮಂದಿರವಾಗಿದೆ. ಈ ಮಂದಿರವು ಗರ್ಭಗೃಹ, ಸಭಾಮಂಟಪವನ್ನು ಹೊಂದಿದ್ದು ಸುತ್ತಲೂ ಪ್ರದಕ್ಷಿಣಾ ಪಥವಿದೆ. ಕಪ್ಪು ಶಿಲೆಯಿಂದ ರಚಿತವಾದ ಪಾರ್ಶ್ವನಾಥನ ವಿಗ್ರಹವು ಆಕರ್ಷಕವಾಗಿದ್ದು, ಗರ್ಭಗೃಹದ ದ್ವಾರದ ಮೇಲೆ ಗಜಲಕ್ಷ್ಮಿಯ ಬಿಂಬವಿದೆ. ಹಾಗೆಯೇ ೩

ಪ್ರವೇಶ ದ್ವಾರಗಳಿದ್ದು, ದ್ವಾರದಲ್ಲಿ ದ್ವಾರಪಾಲಕರನ್ನು ಕಾಣಬಹುದು. ಹಾಗೆಯೇ ಸ್ತ್ರೀಯರ ಪ್ರತಿಮೆಗಳು ಇಲ್ಲಿವೆ.[೮೦] ಪಾರ್ಶ್ವನಾಥ ತಿರ್ಥಂಕರನ ಹಿಂದೆ ನಾಗರಶಿಲ್ಪವಿದ್ದು ಅದು ಹೆಡೆ ಎತ್ತಿ ನಿಂತಿರುವುದು ಕಂಡುಬರುತ್ತದೆ.

ಈ ಜಿನಾಲಯದಲ್ಲಿ ಪಾರ್ಶ್ವನಾಥ ತೀರ್ಥಂಕರನ ವಿಗ್ರಹದ ಬಲಭಾಗದಲ್ಲಿ ಚಂದ್ರನಾಥನ ವಿಗ್ರಹವು ಸುಂದರವಾಗಿದ್ದು, ಪೀಠದಲ್ಲಿ ಕಿರು ಶಾಸನವಿದೆ. ಅದು ಶ್ರೀ ಯೂಪನಿಯ ಸಂಘವನ್ನು ತಿಳಿಯಲು ಸಹಾಯಕವಾಗಿದೆ.

**೨. ಸಿರವಾಳದ ಜೈನ ದೇವಾಲಯ**

ಈ ಜೈನ ದೇವಾಲಯವು ಸಿರವಾಳ ಗ್ರಾಮದ ಪೂರ್ವದ ದಿಕ್ಕಿನಲ್ಲಿದ್ದು, ಇದೊಂದು ತ್ರಿಕೂಟ ಜೈನ ಬಸದಿಯಾಗಿದೆ.[೮೧]

ಈ ಜೈನ ದೇವಾಲಯಕ್ಕೆ ಅಧಿಷ್ಠಾನದ ಭಾಗವನ್ನು ಹೊರತುಪಡಿಸಿ ಉಳಿದ ಎಲ್ಲ ಭಾಗಗಳು ನಾಶವಾಗಿವೆ. ಜಿನಾಲಯವು 'T' ಆಕಾರದಲ್ಲಿದ್ದು, ಮೂರು ಗರ್ಭಗೃಹವನ್ನು ಹೊಂದಿದೆ. ಜೊತೆಗೆ ಅಂತರಾಳ, ಸಭಾಮಂಟಪವನ್ನು ಹೊಂದಿದೆ. ಈ ಸಭಾಮಂಟಪದ ಮಧ್ಯಭಾಗವು ಎತ್ತರವಾಗಿದ್ದು ಎರಡು ಭಾಗಗಳನ್ನು ಒಳಗೊಂಡಿದೆ. ಅಧಿಷ್ಠಾನದ ಭಾಗವು ಪೂರ್ವಾಭಿಮುಖವಾಗಿದ್ದು ದೇವಾಲಯವು ಸಹ ಪೂರ್ವಾಭಿಮುಖವಾಗಿತ್ತು ಎಂದು ತಿಳಿಯಬಹುದು.[೮೨]

ಜಗತಿ, ಕುಮುದ, ಕಪೋತ ಭಾಗಗಳಿಂದ ಅಧಿಷ್ಠಾನವು ನಿರ್ಮಿಸಲ್ಪಟ್ಟಿದ್ದು ಕಂಬಗಳ ಮೇಲೆ ತೀರ್ಥಂಕರ ಶಿಲ್ಪಗಳಿದ್ದು ಅವು ಒಡೆದು ಹಾಳಾಗಿವೆ. ದೇವಾಲಯದ ಕುರುಹುಗಳು ಅಲ್ಲಿ ಕಂಡುಬರುತ್ತವೆ. ಆದರೆ ದೇವಾಲಯವು ಸಂಪೂರ್ಣವಾಗಿ ಹಾಳಾಗಿದ್ದು ಅಧಿಷ್ಠಾನದ ಭಾಗ ಮಾತ್ರ ನಮಗೆ ಅಧ್ಯಯನಕ್ಕೆ ಲಭಿಸುತ್ತದೆ.

**೪.೪ ಮಸೀದಿಗಳು**

**೧. ಬಾರಾಬರಿ ವಾಸ್ತುಶಿಲ್ಪ**

| | | |
|---|---|---|
| ಗ್ರಾಮ | : | ಗೋಗಿ. |
| ಸ್ಥಳ | : | ಬಾರಾಬರಿ ವಾಸ್ತುಶಿಲ್ಪ |
| ಶೈಲಿ | : | ಆದಿಲ್ ಶಾಹಿಗಳ ಶೈಲಿ |
| ಅಭಿಮುಖ | : | ಪಶ್ಚಿಮಾಭಿಮುಖ. |
| ಕಾಲ | : | ಕ್ರಿ.ಶ. ೧೪-೧೫ನೇ ಶತಮಾನ. |
| ಸ್ಥಿತಿ | : | ಉತ್ತಮ. |

ಗೋಗಿ ಗ್ರಾಮದಿಂದ ಪಶ್ಚಿಮಕ್ಕೆ ೧ ಕಿ.ಮೀ. ಅಂತರದಲ್ಲಿರುವ ಈ ಬಾರಬಾರಿ ವಾಸ್ತುಶಿಲ್ಪವು ಆದಿಲ್ ಶಾಹಿಗಳ ಶೈಲಿಯಲ್ಲಿದ್ದು ಇದುರ ಅಧಿಷ್ಠಾನವು(ಜಗಲಿ) ೧೦ ಅಡಿಗಳಷ್ಟು ಎತ್ತರದಲ್ಲಿದೆ. ಸೇದಿಕಲ್ಲು ಮತ್ತು ಕೆಂಪು ಮರಳು ಮಿಶ್ರಿತ(ಕಂಬಗಳ ಮಧ್ಯದಲ್ಲಿ ಸಮನಾಂತರ ಕಾಪಾಡಲು ಏಕಶಿಲೆಯ ಕಪ್ಪು ಕಲ್ಲುಗಳಿಂದ) ಕಲ್ಲಿನಿಂದ ನಿರ್ಮಿಸಿದ ಈ ವಾಸ್ತುಶಿಲ್ಪವು ೧೨ ಕಮಾನುಗಳಿಂದ ಕೂಡಿದೆ. ಈ ಕಮಾನುಗಳ ಮೇಲೆ ಗ್ರೀವವು ಹೋರಚಾಚಿದೆ. ಬಾರಾಬರಿಯ ಮೇಲೆ ಒಟ್ಟು ೧೬ ಮಿನಾರಗಳನ್ನು ಕಾಣಬಹುದು. ಸುಂದರವಾಗಿ ಸುರುಳಿಯಾಕಾರದ ಹೂ ಬಳ್ಳಿಗಳಿಂದ ಅಲಂಕರಿಸಿದ್ದಾರೆ. [೮೩] ಇದು ಸುಂದರ ಕಲಾ ಶೈಲಿಗೆ ಪ್ರಮುಖ ಸಾಕ್ಷಿಯಾಗಿದೆ. ಈ ಬಾರಾಬರಿಯಲ್ಲಿ ಹಿಂದೆ ಸಂತ ಚಂದಾ ಹುಸ್ಸೈನಿ ನಿಧನ ಹೊಂದಿದಾಗ ಶವವನ್ನು ಅಲ್ಲಿ ಇಟ್ಟು ವಿಶ್ರಾಂತಿ ಪಡೆದು ಮುನ್ನಡೆದರಂತೆ. ಹಾಗಾಗಿ ಇದು ಆದಿಲ್ ಶಾಹಿ ಅರಸರು ಬಿಜಾಪುರದಿಂದ ಗೋಗಿ ಗ್ರಾಮಕ್ಕೆ ಬರುವ ಮುಂಚೆ ಅಲ್ಲಿ ವಿಶ್ರಾಂತಿ ತೆಗೆದುಕೊಂಡ ನಂತರ ಮುನ್ನಡೆಯುತ್ತಿದ್ದರು ಎನ್ನುವ ಐತಿಹ್ಯವಿದೆ.

'ಈ ಬಾರಾಬರಿಯು ಸದೃಢವಾಗಿದ್ದು ಯಾವುದೇ ಹಾನಿಗೊಳಗಾಗದೆ ಸುರಕ್ಷಿತವಾಗಿದೆ. ಅದರೆ ಇದರ ಸುತ್ತಲೂ ಮುಳ್ಳುಗಳು ಬೆಳೆದಿದ್ದು ಅದರ ಸೌಂದರ್ಯವನ್ನು ಹಾಳು ಮಾಡುತ್ತಿವೆ.'

**೨. ಗೋಗಿ**

| | | |
|---|---|---|
| ಸ್ಥಳ | : | ಸಂತ ಚಂದಾ ಹುಸ್ಸೈನಿ ದರ್ಗಾ |
| ಶೈಲಿ | : | ಬಹಮನಿಯರ ವಾಸ್ತುಶೈಲಿ |
| ಅಭಿಮುಖ | : | ಪಶ್ಚಿಮಾಭಿಮುಖ. |
| ಕಾಲ | : | ಕ್ರಿ.ಶ. ೧೩–೧೪ನೇ ಶತಮಾನ. |
| ಸ್ಥಿತಿ | : | ಉತ್ತಮ. |
| ಸಂರಕ್ಷಣೆ | : | ಇದೆ. |

ಸಗರ ಗೋಗಿ ಗ್ರಾಮಗಳು ತಾಲೂಕಿನಲ್ಲಿ ಮುಸ್ಲಿಂ ವಾಸ್ತುಶಿಲ್ಪದ ಉತ್ತುಂಗ ಹಂತದಲ್ಲಿದ್ದವು. ಗೋಗಿ ಗ್ರಾಮದ ಮಧ್ಯದಲ್ಲಿರುವ ಬಹಮನಿಯರ ವಾಸ್ತುಶೈಲಿಯಲ್ಲಿ ನಿರ್ಮಾಣಗೊಂಡ ಈ ಸಂತ ಚಂದಾ ಹುಸ್ಸೈನಿ ದರ್ಗಾವು ವಾಸ್ತುಶಿಲ್ಪದ ಖಣಿಯಾಗಿದೆ. ಕ್ರಿ.ಶ. ೧೪ನೆಯ ಶತಮಾನದಲ್ಲಿ ಮಹಾನ್ ಸಂತನಾಗಿದ್ದ ಸಂತ ಚಂದಾ ಹುಸ್ಸೈನಿ ಕ್ರಿ.ಶ ೧೪೫೪ರಲ್ಲಿ ಮರಣ ಹೊಂದಿದನು(ಈ ದರ್ಗಾದಲ್ಲಿ ದೊರೆತ ಶಾಸನದಿಂದ). ಇತನ ಮೇಲೆ ಬಹಮನಿ ಅರಸರು ಅಪಾರ ಗೌರವನ್ನು ಹೊಂದಿದ್ದು, ಬಿಜಾಪುರದ ಪ್ರಾಂತ್ಯಾಧಿಕಾರಿಯಾಗಿದ್ದ

ಯೂಸೂಫ್ ಆದಿಲ್ ಷಾನು ಚಂದಾ ಹುಸ್ಸೈನಿ ಸಂತನ ಮೇಲೆ ಅಪಾರ ಭಕ್ತಿಯನ್ನು ಹೊಂದಿದ್ದನು.

ಬಹಮನಿಯು ೫ ಭಾಗವಾದಾಗ ಬಿಜಾಪುರದ ಶಾಹಿ ಮನೆತನದ ನೇತೃತ್ವವನ್ನು ಯೂಸುಫ್ ಆದಿಲ್ ಷಾ ವಹಿಸಿದ್ದನು. ಅಧಿಕಾರಕ್ಕೆ ಬಂದ ಆದಿಲ್ ಶಾಹಿ ಅರಸರು ಗೋಗಿಗೆ ಭೇಟಿ ನೀಡಿ ದರ್ಗಾದ ನಿರ್ಮಾಣ ಕಾರ್ಯವನ್ನು ಮುಂದುವರಿಸಿದ್ದರು.

ಬಹಮನಿಯರ ವಾಸ್ತು ಶೈಲಿಯಲ್ಲಿರುವ ಇಲ್ಲಿಯ ಪ್ರತಿಯೊಂದು ಗುಮ್ಮಟ ಮತ್ತು ಗೋರಿಗಳನ್ನು ಕಾಣಬಹುದು. ದರ್ಗಾದ ಪಶ್ಚಿಮದಲ್ಲಿರುವ ಈ ಗುಮ್ಮಟವು ಸಮಾನಾಂತರದ ಜಗಲಿಯಲ್ಲಿ ಸುಮಾರು ೨೫ x ೨೫ ಅಡಿಗಳಷ್ಟು ಚಚ್ಚೌಕಾಕಾರವಾಗಿದ್ದು ಇದು ಕಂಬಗಳಿಂದ ಆವೃತಗೊಂಡಿದೆ. ಹಾಗೆಯೇ ನಾಲ್ಕು ದಿಕ್ಕಿನಲ್ಲಿ ಕಮಾನುಗಳನ್ನು ಹೊಂದಿದೆ. ಈ ಗುಮ್ಮಟದ ಮಧ್ಯದಲ್ಲಿ ಆದಿಲ್ ಶಾಹಿ ವಂಶಸ್ಥರ ಗೋರಿಗಳನ್ನು ಕಾಣಬಹುದು.

ಈ ಗುಮ್ಮಟದ ಪ್ರವೇಶದ್ವಾರ ಉತ್ತರಾಭಿಮುಖವಾಗಿದ್ದು ಮೇಲ್ಭಾಗದಲ್ಲಿ ಹೂ ಬಳ್ಳಿಗಳಿಂದ ಅಲಂಕಾರಗೊಳಿಸಲಾಗಿದೆ. ಗುಮ್ಮಟದ ಮೇಲ್ಭಾಗದ ಕೊನೆಯಲ್ಲಿ ಮಿನಾರುಗಳು ಕಂಡುಬರುತ್ತವೆ.

ಈ ದರ್ಗಾದ ಆವರಣದಲ್ಲಿ ಆದಿಲ್ ಶಾಹಿಗಳ ಶೈಲಿಯಲ್ಲಿ ನಿರ್ಮಾಣಗೊಂಡ ಇನ್ನೊಂದು ಗುಮ್ಮಟವಿದ್ದು. ಇದು ಸಮಾನಾಂತರದ ಜಗಲಿಯ ಮೇಲೆ ನಿರ್ಮಾಗೊಂಡಿದೆ. ಇದೂ ಸಹ ಗೋರಿಗಳಿಂದ ಕೂಡಿದ ಗುಮ್ಮಟವಾಗಿದೆ. ಪೂರ್ವ ಪಶ್ಚಿಮಕ್ಕೆ ೨ ಕಮಾನುಗಳು, ಉತ್ತರ ದಕ್ಷಿಣಕ್ಕೆ ೩ ಕಮಾನುಗಳನ್ನು ಹೊಂದಿದೆ. ಈ ಗುಮ್ಮಟಕ್ಕೆ ಹೊರಚಾಚಿದ ಗ್ರೀವದ (ಸಜ್ಜಾದಂತೆ) ವ್ಯವಸ್ಥೆ ಇದೆ. ಮೇಲ್ಭಾಗದಲ್ಲಿ ಹೂಬಳ್ಳಿಗಳಿಂದ ಅಲಂಕರಿಸಿದ ಸಾಲುಗಳಿವೆ. ಪ್ರತಿ ಕೊನೆಯಲ್ಲಿ ಮಿನಾರುಗಳಿವೆ. ಪ್ರವೇಶಕ್ಕಾಗಿ ಪೂರ್ವ, ಪಶ್ಚಿಮ, ದಕ್ಷಿಣ ದಿಕ್ಕಿನಲ್ಲಿ ದ್ವಾರಗಳಿವೆ.

ಈ ಗುಮ್ಮಟದ ಮಧ್ಯದಲ್ಲಿ ಚಂದಾ ಹುಸ್ಸೈನಿಯ ಹೆಂಡತಿ ಮತ್ತು ಮಗನ ಗೋರಿಗಳಿವೆ. ಇಂದಿಗೂ ಇಲ್ಲಿ ನವ ದಂಪತಿಗಳು '**ನಮಾಜ್**'(ಪ್ರಾರ್ಥನೆ) ಸಲ್ಲಿಸುತ್ತಿದ್ದು ಈ ಗೋರಿಯ ವಿಶೇಷವಾಗಿದೆ.

ದರ್ಗಾದ ಪಶ್ಚಿಮ ದ್ವಾರವನ್ನು ಎರಡನೇ ಇಬ್ರಾಹಿಂ ಆದಿಲ್ ಶಾಹನು ನಿರ್ಮಿಸಿದನು ಎಂದು ತಿಳಿಯಲು ಇಲ್ಲಿಯ ಪರ್ಶಿಯನ್ ಶಾಸನವೇ ಆಧಾರವಾಗಿದೆ. ಇನ್ನೊಂದು ಪರ್ಶಿಯನ್ ಶಾಸನವು ನಮಗೆ ಲಭ್ಯವಿದ್ದು ಅದು ಸಂತನ ಮರಣ ಹಿಂಜರಿ ೮೫೮ (ಕ್ರಿ.ಶ.೧೪೫೪) ಎಂದು ಉಲ್ಲೇಖಿಸಿದೆ.

ದರ್ಗಾದಲ್ಲಿ ಬಾವಿ ಇದ್ದು ಅದನ್ನು 'ಬಾಣತಿ ಬಾವಿ' ಎಂದು ಕರೆಯುತ್ತಾರೆ. ಈ ಬಾವಿಯ ಪ್ರವೇಶಕ್ಕಾಗಿ ಮೆಟ್ಟಿಲುಗಳಿವೆ. ದರ್ಗಾದ ಪಕ್ಕದಲ್ಲಿ ಸಂಗಮನಾಥನ ದೇವಾಲಯವಿದ್ದು ಇದು ಹಿಂದು ಮುಸ್ಲಿಂ ಬಾವೈಕ್ಯತೆಯ ಪ್ರತಿಕವಾಗಿದೆ. ಹಾಗೆಯೇ ದರ್ಗಾದ ಸುತ್ತಲೂ ರಕ್ಷಣಾ ಗೋಡೆಯನ್ನು ನಿರ್ಮಿಸಲಾಗಿದೆ.

**೩. ಸೋಫಿಶರಮಸ್ತರ ದರ್ಗಾ**

| | | |
|---|---|---|
| ಗ್ರಾಮ | : | ಸಗರ. |
| ಸ್ಥಳ | : | ಸೋಫಿಶರಮಸ್ತರ ಸಂತನ ಸಮಾಧಿ ದರ್ಗಾದ ಹಜಾರ. |
| ಶೈಲಿ | : | ಬಹಮನಿಯರ ವಾಸ್ತುಶೈಲಿ |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೩–೧೪ನೇ ಶತಮಾನ |
| ಸ್ಥಿತಿ | : | ಉತ್ತಮ. |
| ಸಂರಕ್ಷಣೆ | : | ಇದೆ. |

ಸಗರ ಗ್ರಾಮದ ಉತ್ತರ ದಿಕ್ಕಿನಲ್ಲಿ ೨ ಕಿ.ಮೀ. ದೂರದಲ್ಲಿರುವ ಈ ದರ್ಗಾವು ಸ್ಥಳೀಯವಾಗಿ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದು ಇಲ್ಲಿ ಸೋಫಿಶರಮಸ್ತರ ಸಂತನ ಸಮಾಧಿ ಇದ್ದು ಇದರ ಪಕ್ಕದಲ್ಲಿ ಒಂದು ಹಜಾರ(ಧ್ಯಾನ ಮಂದಿರ) ಇದೆ. ಈ ಹಜಾರವು ೩೦ x ೩೦ ಅಡಿ ಉದ್ದ–ಅಗಲವನ್ನು ಹೊಂದಿದ್ದು ೭ x ೩ ಕಂಬಗಳ ಸಾಲಿನಿಂದ ಕೂಡಿದೆ. ಈ ಕಂಬಗಳ ಮೇಲ್ಭಾಗವು ಕಮಾನುಗಳಿಂದ ಆವೃತವಾಗಿದ್ದು, ಈ ಹಜಾರದ ಮೇಲೆ ಪ್ರತಿ ಕೊನೆಯಲ್ಲಿ ಮಿನಾರುಗಳಿವೆ. ಹಜಾರದ ಪಕ್ಕದಲ್ಲಿ ಸಂತನ ಸಮಾಧಿ ಸ್ಥಳವನ್ನು ಕಾಣಬಹುದಾಗಿದೆ.

ಹಜಾರದ ಮುಂದೆ ಒಂದು ಬಾವಿ ಇದ್ದು, ಇಲ್ಲಿ ೧೧ ಸಾಲಿನ ಕಪ್ಪುಶಿಲೆಯಲ್ಲಿ ರಚನೆಯಾದ ಪರ್ಶಿಯನ್ ಶಾಸನವನ್ನು ಬಾವಿ ಗೋಡೆಗೆ ಅಂಟಿಸಲಾಗಿದೆ. ಈ ದರ್ಗಾಕ್ಕೆ ನಿತ್ಯವೂ ನೂರಾರು ಭಕ್ತಾದಿಗಳು ಬಂದು ಹೋಗುತ್ತಾರೆ. ಹಾಗೆಯೇ ಜನವರಿ ತಿಂಗಳಿನಲ್ಲಿ ಉರುಸ್ ನಡೆಯುತ್ತದೆ.

**೪. ಬಡಾದರ್ವಾಜ್ (ಮಹಾದ್ವಾರ)**

ಸಗರ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ಈ ಬಡಾದರ್ವಾಜ್ ಚಚ್ಚೌಕಾಕಾರವಾಗಿದ್ದು ಇದು ಸುಮಾರು ೪೦ x ೪೦ ಅಡಿಗಳಲ್ಲಿ ನಿರ್ಮಾಣಗೊಂಡಿದೆ. ಈ ದರ್ವಾಜವು ಕೋಟೆ ಗೋಡೆಯ ಪ್ರವೇಶ ದ್ವಾರವಾಗಿದೆ. ಗ್ರಾಮದ ಸುತ್ತಲೂ ಕೋಟೆ ಗೋಡೆ ಇದ್ದು ಅದು ಈಗ ನಾಶವಾಗಿ ದ್ವಾರ ಮಾತ್ರ ಉಳಿದುಕೊಂಡಿದೆ.

ಈ ದರ್ವಾಜವು ೩ ಅಂತಸ್ತುಗಳಿಂದ ಕೂಡಿದ್ದು ಇದರ ನಿರ್ಮಾಣಕ್ಕೆ ಕಲ್ಲು, ಇಟ್ಟಿಗೆ, ಗಾರೆ, ಸುಣ್ಣ, ಸಿಮೆಂಟನ್ನು ಬಳಸಿದ್ದಾರೆ. ದರ್ವಾಜದ ಸುತ್ತಲೂ ಗೋಡೆಗಳಿಂದ ಕೂಡಿದ್ದು ಮಧ್ಯದಲ್ಲಿ ಕಂಬಗಳಿದ್ದು ನೆಲಮಟ್ಟದಿಂದ ೧೦ ಅಡಿ ಎತ್ತರದಲ್ಲಿರುವ ಜಗಲಿಯಲ್ಲಿ ಇದನ್ನು ನಿರ್ಮಿಸಿದ್ದಾರೆ. ಈ ದರ್ವಾಜದ ಮಧ್ಯದಲ್ಲಿರುವ ಕಂಬಗಳು ಕಲ್ಯಾಣ ಚಾಲುಕ್ಯರ ಶೈಲಿಯನ್ನು ಹೋಲುವ ಕಪ್ಪು ಶಿಲೆಯ ರಚನೆಯಾಗಿವೆ. ಈ ಕಂಬಗಳ ಮೇಲೆ ಬಹಮನಿಯರು ಸುಣ್ಣ ಗಾರೆ ಸಿಮೆಂಟನ್ನು ಮೆತ್ತಿರುವುದು ಕಂಡುಬರುತ್ತದೆ. ಅದೇ ರೀತಿ ದರ್ವಾಜದ ಮೇಲಿನ ಅಂತಸ್ತಿಗೆ ಪ್ರವೇಶಿಸುವ ಪ್ರವೇಶದ್ವಾರವೂ ಸಹ ಚಾಲುಕ್ಯರ ಶೈಲಿಯಲ್ಲಿರುವುದು ಗಮನಾರ್ಹ.

ದರ್ವಾಜದ ಮೇಲ್ಚಾವಣಿಯಲ್ಲಿ ಸುರುಳಿಯಾಕಾರದ ಹೂ ಬಳ್ಳಿಗಳನ್ನು ಸುಂದರವಾಗಿ ಅಲಂಕರಿಸಿದ್ದಾರೆ. ಹಾಗೆಯೇ ದರ್ವಾಜದ ಮುಂಭಾಗದಲ್ಲಿ ಒಂದೇ ಕಪ್ಪು ಶಿಲೆಯ ಮೇಲೆ ಎರಡು ಭಾಗವಾಗಿ ವಿಭಾಗಿಸಿ ಶಾಸನಗಳನ್ನು ಕೊರೆಯಲಾಗಿದೆ. ಈ ಶಾಸನಗಳು ಎರಡನೇ ಮಹ್ಮದ್ ಷಾನ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ.

'ಸದ್ಯ ಈ ದರ್ವಾಜವು ಸಂಪೂರ್ಣವಾಗಿ ಹಾಳಾಗಿದ್ದು ಜನತೆ ಅದನ್ನು ತಮ್ಮ ಮಲಬಾಧೆ, ಮೂತ್ರಬಾಧೆಯನ್ನು ತೀರಿಸಿಕೊಳ್ಳಲು ಉಪಯೋಗಿಸುತಿದ್ದು ಖೇಧಕರವಾದ ಸಂಗತಿಯಾಗಿದೆ.'

**೫. ಮಹಲ್ ರೋಜಾ**

| | | |
|---|---|---|
| ಗ್ರಾಮ | : | ಮಹಲ್ ರೋಜಾ |
| ಸ್ಥಳ | : | ರೋಜಾ ಗ್ರಾಮದಲ್ಲಿಯ ಗುಮ್ಮಟ. |
| ಶೈಲಿ | : | ಬಹಮನಿಯರ ವಾಸ್ತುಶೈಲಿ |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೩–೧೪ನೇ ಶತಮಾನ |
| ಸ್ಥಿತಿ | : | ಶಿಥಿಲಾವಸ್ಥೆ |
| ಸಂರಕ್ಷಣೆ | : | ಇಲ್ಲ. |

ಸಗರ ಗ್ರಾಮದಿಂದ ಪಶ್ಚಿಮಕ್ಕೆ ೨ ಕಿ.ಮೀ. ದೂರದಲ್ಲಿರುವ ಗ್ರಾಮವೇ ಮಹಲ್ ರೋಜಾ. ಈ ಗುಮ್ಮಟವು ೨೫ x ೨೫ ಅಡಿ ಚಚ್ಚೌಕಾಕಾರದಲ್ಲಿ ನಿರ್ಮಿಸಿದ್ದು ಈ ಗುಮ್ಮಟವು ಬಹಮನಿಯರ ಶೈಲಿಯಲ್ಲಿರುವದನ್ನು ಕಾಣುತ್ತೇವೆ. ಈ ಗುಮ್ಮಟದ ಮುಂದೆ ಕಪ್ಪು ಶಿಲೆಯಲ್ಲಿ ರಚಿತವಾದ ಶಾಸನ ಇದೆ. ಈ ಗುಮ್ಮಟದ ಅಲಂಕಾರಕ್ಕೆ ಗಾರೆ, ಸುಣ್ಣದ ಕಲ್ಲು, ಸಿಮೆಂಟನ್ನು ಬಳಸಿದ್ದಾರೆ.

'ಇದೇ ಹೋಲಿಕೆಯಲ್ಲಿರುವ ಗುಮ್ಮಟಗಳು ಗ್ರಾಮದಲ್ಲಿ ಹಲವಾರು ಇದ್ದು ಇವೂ ಸಹ ಶಿಥಿಲಾವಸ್ಥೆಯನ್ನು ತಲುಪಿವೆ.'

**೬. ಜಾಮ್ಮಿಯಾ ಮಸೀದಿ**

| | | |
|---|---|---|
| ಊರು | : | ಸಗರ. |
| ಸ್ಥಳ | : | ಜಾಮ್ಮಿಯಾ ಮಸೀದಿ |
| ಶೈಲಿ | : | ಬಹಮನಿಯರ ಶೈಲಿ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೩-೧೪ನೇ ಶತಮಾನ |
| ಸ್ಥಿತಿ | : | ಶಿಥಿಲಾವಸ್ಥೆ |
| ಸಂರಕ್ಷಣೆ | : | ಇಲ್ಲ. |

ಸಗರದಿಂದ ಮಹಲ್ ರೋಜಾ ಗ್ರಾಮಕ್ಕೆ ಹೋಗುವ ಮಾರ್ಗದ ಮಧ್ಯದಲ್ಲಿರುವ ಈ ಜಾಮ್ಮಿಯಾ ಮಸೀದಿಯು ಒಂದು ಸುಂದರವಾದ ಕಟ್ಟಡವಾಗಿದೆ. ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ಈ ಮಸೀದಿಯು ಬಹಮನಿಯರ ಸುಲ್ತಾನರಿಂದ ನಿರ್ಮಾಣಗೊಂಡಿದೆ. ಇದರ ನಿರ್ಮಾಣಕ್ಕೆ ಇಟ್ಟಿಗೆ, ಸುಣ್ಣ, ಗಾರೆ, ಸಿಮೆಂಟ್‌ಗಳನ್ನು ಬಳಸಲಾಗಿದೆ. ಇಲ್ಲಿ ಸುಮಾರು ೧೦ ಕಂಬಗಳ ೩ ಸಾಲುಗಳಿಂದ (೩೦ ಕಂಬಗಳಿಂದ) ಆವೃತಗೊಂಡಿದ್ದು ಈ ಮಸೀದಿಯ ಒಳಭಾಗವು ಯಾವುದೇ ಕೊನದಿಂದ ನೋಡಿದರೂ ಒಂದೇ ರೀತಿ ಕಾಣಿಸುತ್ತದೆ. ಪ್ರತಿ ಕಂಬದ ಮೇಲೆ ಕಮಾನುಗಳಿಂದ ಕೂಡಿದ್ದು, ಮೇಲ್ಭಾಗದಲ್ಲಿ ಮಿನಾರುಗಳ ಸಾಲುಗಳು ಕಂಡುಬರುತ್ತವೆ.

ಮಸೀದಿಯ ಹೊರಭಾಗದಲ್ಲಿ ವಿಶಾಲವಾದ ಪ್ರಾಂಗಣ ಇದ್ದು, ಇದು ೬೦ x ೬೦ ಅಡಿ ಉದ್ದ ಅಗಲವನ್ನು ಹೊಂದಿದೆ. ಮಧ್ಯದಲ್ಲಿ ಹಜರತ್ ಮುನಾವರ್ ಬಾದಶಾಹ ಮತ್ತು ತಾಜು ಆಲ್ ದಿನ್ ಶೇಖ ಮುನಾವರ್ ಬಾದಶಾಹನ ಗೋರಿಗಳು ಕಂಡು ಬರುತ್ತವೆ. ಈ ಪ್ರಾಂಗಣವನ್ನು ಪ್ರವೇಶಿಸಲು ಉತ್ತರದಲ್ಲಿ ಪ್ರವೇಶ ದ್ವಾರವಿದ್ದು ಪ್ರಾಂಗಣದ ಸೂತ್ತಲೂ ಬೃಹದಾಕಾರದ ರಕ್ಷಣಾಗೋಡೆಯನ್ನು ನಿರ್ಮಿಸಿದ್ದಾರೆ. ಅದರ ಮೇಲೆ ಮಿನಾರುಗಳಿದ್ದು ಪ್ರತಿ ಕೊನೆಯಲ್ಲಿಯೂ ನಿರ್ಮಾಣಗೊಂಡಿವೆ. ಇದಲ್ಲದೆ ಈ ಮಸೀದಿಯ ಸುತ್ತಲೂ ಮುಸ್ಲಿಂ ಸಮುದಾಯದ ಗೋರಿಗಳನ್ನು ಕಾಣಬಹುದು. ಸದ್ಯ ಈ ಮಸೀದಿಯು ಶಿಥಿಲಾವಸ್ಥೆಯಲ್ಲಿರುವುದನ್ನು ಕಾಣಬಹುದಾಗಿದೆ.

**೪.೩ ಇತರ ದೇವಾಲಯಗಳು**

### ೧. ಅಣಬಿ

| | | |
|---|---|---|
| ಸ್ಥಳ | : | ದೇವಾಲಯಗಳ ಸಮೂಹ. |
| ಶೈಲಿ | : | ರಾಷ್ಟ್ರಕೂಟ |
| ಅಭಿಮುಖ | : | ಪೂರ್ವಾಭಿಮುಖ-ಪಶ್ಚಿಮಾಭಿಮುಖ. |
| ಕಾಲ | : | ಕ್ರಿ.ಶ. ೯-೧೦ನೇ ಶತಮಾನ. |
| ಬಳಸಿದ ಕಲ್ಲು | : | ಕೆಂಪು ಮರಳು ಮಿಶ್ರಿತ ಕಲ್ಲು ಸೇದಿಕಲ್ಲು. |
| ಸ್ಥಿತಿ | : | ಶಿಥಿಲಾವಸ್ಥೆ. |
| ಸಂರಕ್ಷಣೆ | : | ಇಲ್ಲ. |

ಅಣಬಿ ಗ್ರಾಮವು ಭೀಮಾ ನದಿಯ ಬಲದಂಡೆಯ ಮೇಲೆ ನಿಸರ್ಗದತ್ತವಾದ ಬಂಡೆಗಳ ಮೇಲೆ ಉದಯಿಸಿದ ಗ್ರಾಮವಾಗಿದೆ. ಅಣಬಿ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಈ ದೇವಾಲಯಗಳ ಸಮೂಹವು ಅವಸಾನದ ಅಂಚಿನಲ್ಲಿವೆ. ನೆಲಮಟ್ಟದಿಂದ ಎತ್ತರ ಪ್ರದೇಶದಲ್ಲಿ ನಿರ್ಮಾಣವಾಗಿರುವ ಈ ದೇಗುಲದ ಅಧಿಷ್ಠಾನವು ೪ ಅಡಿ ಎತ್ತರವಾಗಿದೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗಗಳನ್ನು ಹೊಂದಿದ್ದು ಅಂತರಾಳವು ಸ್ತಂಭಗಳಿಂದ ಆವೃತಗೊಂಡಿದೆ. ಕಂಬಗಳಲ್ಲಿ ಯಾವುದೇ ರಿತಿಯ ಅಲಂಕಾರಿಕ ಶಿಲ್ಪಗಳು ಕಂಡುಬರುವುದಿಲ್ಲ.

ಈ ದೇವಾಲಯದ ಪ್ರವೇಶಕ್ಕಾಗಿ ಮೆಟ್ಟಿಲುಗಳನ್ನು ನಿರ್ಮಿಸಿದ್ದಾರೆ. ಇವುಗಳ ಎರಡು ಕೊನೆಯಲ್ಲಿ **'ಹಸ್ತ ಹಸ್ತಿ'** ಇವೆ(ಇವು ಮೆಟ್ಟಿಲುಗಳ ಅಕ್ಕ-ಪಕ್ಕದ ಕಟ್ಟಕಡೆಗೆ ಇರುತ್ತವೆ. ಇದಕ್ಕೆ ಹಸ್ತ ಹಸ್ತಿ ಎಂದು ಹೆಸರು ೮೪ ಆನೆಯ ಸೊಂಡಿಲು, ಸಿಂಹ, ವ್ಯಾಳಿ ಮುಂತಾದ ಪ್ರಾಣಿಗಳ ರೂಪದಲ್ಲಿ ಶಿಲ್ಪಗಳನ್ನು ಕೊರೆಸುತ್ತಿದ್ದರು). ಸದ್ಯ ದೇಗುಲವು ಹಾಳಾಗಿದ್ದು ಅದನ್ನು ಸ್ಥಳೀಯರು ತಮ್ಮ ಸ್ವಂತ ಉಪಯೋಗಕ್ಕಾಗಿ ಬಳಸಿಕೊಳ್ಳುತ್ತಿದ್ದು ಇದರಿಂದ ಇತಿಹಾಸದ ಕುರುಹುಗಳು ನಾಶವಾಗುವ ಸಾಧ್ಯತೆಗಳಿವೆ.

### ೨. ಅಣಬಿ

| | | |
|---|---|---|
| ಸ್ಥಳ | : | ದೇವಾಲಯಗಳ ಸಮೂಹ. |
| ಶೈಲಿ | : | ರಾಷ್ಟ್ರಕೂಟರ ಕಾಲದ್ದು. |
| ಕಾಲ | : | ಕ್ರಿ.ಶ. ೧೦ನೇ ಶತಮಾನ. |
| ಸ್ಥಿತಿ | : | ಶಿಥಿಲಾವಸ್ಥೆ |
| ಸಂರಕ್ಷಣೆ | : | ಇಲ್ಲ. |

ಈ ಗ್ರಾಮದಲ್ಲಿ ಸೇದಿಕಲ್ಲು ಮತ್ತು ಕೆಂಪು ಮರಳು ಮಿಶ್ರಿತ ಕಲ್ಲಿನಿಂದ ನಿರ್ಮಿಸಿದ್ದ ರಾಷ್ಟ್ರಕೂಟರ ಕಾಲದ ದೇಗುಲಗಳ ಸಮೂಹದ ಸಾಲು ಇಲ್ಲಿ ಕಂಡುಬರುತ್ತವೆ. ರಾಷ್ಟ್ರಕೂಟರ ಕಾಲದ ಈ ದೇಗುಲಗಳ ಸಮೂಹದಲ್ಲಿ ಸಾವಿರಾರು ವಿದ್ಯಾರ್ಥಿಗಳು ಜ್ಞಾನಾರ್ಜನೆಯನ್ನು ಮಾಡುತ್ತಿದ್ದ ಸ್ಥಳವಾಗಿದ್ದು, ಇಂತಹ ಈ ಗ್ರಾಮ ಅಂದು ಪ್ರಮುಖ ಅಗ್ರಹಾರವಾಗಿ ಮೆರೆದಿತ್ತು ಎಂದು ಇಲ್ಲಿ ದೊರೆತ ಶಾಸನಗಳು ಮತ್ತು ದೇಗುಲಗಳ ಸಮೂಹಗಳ ಆಧಾರದಿಂದ ತಿಳಿದುಬರುತ್ತದೆ.

ಈ ದೇಗುಲಗಳನ್ನು ಪ್ರವೇಶಿಸಲು ಮಹಾದ್ವಾರವು ಇದ್ದು, ಸುತ್ತಲೂ ಬೃಹತ್ ಬಂಡೆಗಳಿದ ರಚಿಸಿದ ರಕ್ಷಣಾಗೋಡೆ ಇದೆ. ಈ ದೇಗುಲಗಳ ಸಮೂಹದಲ್ಲಿ ಒಟ್ಟು ೧೨ ದೇಗುಲಗಳನ್ನು ಕಾಣಬಹುದಾಗಿದ್ದು, ಅವುಗಳ ದ್ವಾರದ ಅಕ್ಕ ಪಕ್ಕದಲ್ಲಿ ಪೂರ್ಣ ಕುಂಭಗಳಿಂದ ರಚಿತವಾದ ಶಿಲ್ಪಗಳಿವೆ. ಪ್ರತಿ ದೇಗುಲದಲ್ಲಿ ಗಜಲಕ್ಷ್ಮಿಯ ಬಿಂಬವನ್ನು ನಾವು ಕಾಣಬಹುದಾಗಿದೆ.

ದೇಗುಲದ ಮುಂದೆ ೬-೮ ಅಡಿ ಎತ್ತರವಿರುವ ೨೦ X ೧೫ ಅಡಿಗಳಷ್ಟು ಸಮಾನ ಅಂತರದಲ್ಲಿ ನಿರ್ಮಾಣಗೊಂಡ ಬೃಹತ್ ಅಧಿಷ್ಠಾನದ ಭಾಗವು ಇಲ್ಲಿ ಕಂಡುಬರುತ್ತದೆ. ಈ ಪ್ರದೇಶವು ಅಂದು ಸಭೆ ಸಮಾರಂಭಗಳಿಗಾಗಿ ನಿರ್ಮಿಸಿದ ಬೃಹತ್ ವೇದಿಕೆಯಾಗಿದ್ದು ಇವೆಲ್ಲವುಗಳ ಆಧಾರದಿಂದ ಈ ಗ್ರಾಮವು ಬೃಹತ್ ಅಗ್ರಹಾರವಾಗಿತ್ತು ಎಂದು ತಿಳಿದುಬರುತ್ತದೆ. ಇಂದು ಈ ದೇಗುಲಗಳು ಸೂಕ್ತ ರಕ್ಷಣೆ ಇಲ್ಲದೆ ಶೋಚನೀಯ ಸ್ಥಿತಿಯಲ್ಲಿವೆ.

'ಅಲ್ಲದೆ ಸ್ಥಳೀಯರು ಇವುಗಳನ್ನು ವ್ಯವಸಾಯದ ತ್ಯಾಜ್ಯಗಳನ್ನು ತುಂಬಿಡಲು ಉಪಯೋಗಿಸುತ್ತಿದ್ದಾರೆ. ಹಾಗೆಯೇ ದೇಗುಲಗಳ ಹೊರಗೆ ಮುಳ್ಳಿನ ಗಿಡಗಳು ಬೆಳೆದಿದ್ದು ದೇಗುಲಗಳ ಸೌಂದರ್ಯವನ್ನು ಹಾಳು ಮಾಡುತ್ತಿವೆ ಎಂದು ಹೇಳಬಹುದಾಗಿದೆ.'

**೩. ಎಲ್ಲಮ್ಮ ದೇವಾಲಯ**

| | | |
|---|---|---|
| ಗ್ರಾಮ | : | ಸಗರ |
| ಸ್ಥಳ | : | ಎಲ್ಲಮ್ಮ ದೇವಾಲಯ. |
| ಶೈಲಿ | : | ಬಹಮನಿ |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೦ನೇ ಶತಮಾನ. |
| ಸ್ಥಿತಿ | : | ಉತ್ತಮ |
| ಸಂರಕ್ಷಣೆ | : | ಇದೆ. |

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ನೆಲಮಟ್ಟದಿಂದ ೧೦೦–೧೨೫ ಅಡಿಗಳಷ್ಟು ಎತ್ತರದ ಪ್ರದೇಶದಲ್ಲಿದ್ದು, ಸ್ಥಳೀಯವಾಗಿ ಪ್ರಸಿದ್ಧಿ ಪಡೆದ ಗ್ರಾಮದ ಅಧಿದೇವತೆಯಾಗಿದ್ದಾಳೆ. ದೇವಾಲಯದ ಪ್ರವೇಶಕ್ಕಾಗಿ ಮೆಟ್ಟಿಲುಗಳು ಇದ್ದು, ಈ ದೇವಾಲಯವು ಗರ್ಭಗೃಹ ಅರ್ಧಮಂಟಪವನ್ನು ಹೊಂದಿದೆ. ದೇವಾಲಯದ ಗರ್ಭಗೃಹದಲ್ಲಿ ದೇವಿಯ ಮುಖದ ವಿಗ್ರಹ ಮತ್ತು ನಾಗರ ಶಿಲ್ಪಗಳಿದ್ದು ಅವುಗಳನ್ನು ಇಂದಿಗೂ ಪೂಜಿಸುತ್ತಿರುವುದನ್ನು ನಾವು ನೋಡಬಹುದಾಗಿದೆ.

ಈ ದೇವಾಲಯವು ಬಹಮನಿಯರ ವಾಸ್ತುಶೈಲಿಯನ್ನು ಹೋಲುತ್ತಿದ್ದು, ಜನವರಿ ತಿಂಗಳಿನಲ್ಲಿ ದೇವಿಯ ಜಾತ್ರೆ ಜರುಗುತ್ತದೆ.

**೪. ಶಹಾಪುರ ಕೋಟೆ**

ಶಹಾಪುರದ ದಕ್ಷಿಣ ದಿಕ್ಕಿನಲ್ಲಿರುವ ಈ ಕೋಟೆಯು ಸ್ಥಳೀಯವಾಗಿ ದೊರೆಯುವ ಕಾಡುಗಲ್ಲುಗಳಿಂದ ನಿರ್ಮಾಣವಾಗಿದೆ. ಕೋಟೆಯ ನಿರ್ಮಾಣವು ಕೌಟಿಲ್ಯನು ವಿಂಗಡಿಸಿದ ಕೋಟೆಗಳ ನಾಲ್ಕು ಭಾಗಗಳಲ್ಲಿ ಒಂದಾಗಿರುವ '**ಪಾರ್ವತ**' ದುರ್ಗ(ಗಿರಿದುರ್ಗ)ವಾಗಿದೆ.[೮೫]

ಇದು ಏಳು ಸುತ್ತಿನ ಕೋಟೆಯಾಗಿದ್ದು,[೮೬] ನೆಲಮಟ್ಟದಿಂದ ೧೫೦–೨೦೦ ಅಡಿಗಳಷ್ಟು ಎತ್ತರವಾದ ಪ್ರದೇಶದಲ್ಲಿ ಬೃಹತ್ ಕಲ್ಲು ಬಂಡೆಗಳಿಂದ ನಿರ್ಮಾಣಗೊಂಡಿದೆ. ಈ ಕೋಟೆಗೆ ಪೂರ್ವ, ಪಶ್ಚಿಮ, ದಕ್ಷಿಣ ದಿಕ್ಕುಗಳಲ್ಲಿ ಪ್ರವೇಶ ದ್ವಾರಗಳಿದ್ದು, ಅವು ಬೃಹತ್ ಬಂಡೆಗಳಿಂದ ನಿರ್ಮಾಣಗೊಂಡಿವೆ. ಪೂರ್ವದ ಎರಡು ದ್ವಾರಗಳಲ್ಲಿ ಪರ್ಶಿಯನ್ ಶಾಸನಗಳಿದ್ದು, ಇವುಗಳಿಂದ ಕೋಟೆಯು ಪ್ರಾರಂಭದಲ್ಲಿ ಬಹಮನಿಯರಿಂದ ನಂತರ ಆದಿಲ್ ಶಾಹಿಗಳಿಂದ ಮತ್ತೆ ಸುರಪುರದ ಸಂಸ್ಥಾನದ ಅರಸರಿಂದ ಪೋಷಿಸಲ್ಪಟ್ಟಿವೆ ಎಂಬ ವಿಷಯ ತಿಳಿಯುತ್ತದೆ.

ಈ ಕೋಟೆಯ ಒಳಗೆ 'ದರ್ಬಾರ್ ಹಾಲ್', 'ಮದ್ದಿನ ಸಂಗ್ರಹಣಾ ಕೋಣೆಗಳು', 'ವಸತಿ ಗೃಹಗಳು', ಮತ್ತು 'ಆನೆ, ಕುದುರೆ ಕಟ್ಟುವ ಮನೆಗಳು', ಹಾಗೆಯೇ 'ಸೇವಕರಿಗಾಗಿ ಮನೆಗಳನ್ನು ನಿರ್ಮಿಸಲಾಗಿದ್ದು, ಈ ಕೋಟೆಯ ನಾಲ್ಕು ದಿಕ್ಕುಗಳನ್ನು ನೋಡಿಕೊಳ್ಳುತ್ತಿದ್ದ ಸೈನಿಕರಿಗೆ ರಕ್ಷಣಾ ಗೋಪುರಗಳನ್ನು ನಿರ್ಮಿಸಿದ್ದಾರೆ. ಪೂರ್ವ, ಪಶ್ಚಿಮ, ಉತ್ತರದ ದಿಕ್ಕುಗಳಲ್ಲಿ ತೋಪುಗಳನ್ನು (ಫಿರಂಗಿಗಳು) ನಿರ್ಮಿಸಿದ್ದು ಸದ್ಯ ಕೆಲ ತೋಪುಗಳು ಮಾತ್ರ ಕಂಡುಬರುತ್ತವೆ.

ಔರಂಗಜೇಬನ ಕ್ರೌರ್ಯಕ್ಕೆ ಕೋಟೆಯು ನಾಶವಾಯಿತು. ಕೋಟೆಯನ್ನು ಯಾವ ಅರಸರಿಂದಲೂ ಪುನರ್ ನಿರ್ಮಾಣಗೊಂಡಿಲ್ಲ. ಇಂದು ನಿಧಿಗಳ್ಳರು ಕೋಟೆಯನ್ನು ಅಗೆದು ಕೋಟೆಯಲ್ಲಿನ ಐತಿಹಾಸಿಕ ಆಧಾರಗಳನ್ನು ಮತ್ತು ವಾಸ್ತುಶಿಲ್ಪದ ಕುರುಹುಗಳನ್ನು ನಾಶ

ಮಾಡುತ್ತಿದ್ದಾರೆ.

"ಇಂದಿಗೂ ಕೋಟೆಯಲ್ಲಿ ಜನವರಿ ೨೬, ಅಗಸ್ಟ್೧೫, ಸೆಪ್ಟೆಂಬರ್ ೧೭ರಂದು ಗೃಹರಕ್ಷಕ ದಳದ ಸಿಬ್ಬಂದಿಯರು ಧ್ವಜಾರೋಹಣ ಕಾರ್ಯವನ್ನು ಮಾಡುತ್ತಿದ್ದು ಶ್ಲಾಘನೀಯ ವಿಷಯವಾಗಿದೆ."

**ಟಿಪ್ಪಣಿ**

೭೧. ಎಂ.ಕೊಟ್ರೇಶ್, ಕ.ಪ್ರಾ.ಇ.ಮ.ಪು.ಅ.ಮ, ಪುಟ : ೫೮

೭೨. ರಾಮಚಂದ್ರರಾವ್.ಎಸ್.ಕೆ, ಭಾರತದ ದೇವಾಲಯ–ಮೂರ್ತಿಶಿಲ್ಪ ನೆಲೆ ಹಿನ್ನೆಲೆ,

೭೩. ಎಂ.ಕೊಟ್ರೇಶ್, ಕ.ಪ್ರಾ.ಇ.ಮ.ಪು.ಅ.ಮ, ಪುಟ : ೫೯

೭೪. ಕೂ.ಸ.ಅಪರ್ಣ, ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ : ೧೧–೧೩

೭೫. ಅದೇ, ಪುಟ : ೧೪

೭೬. ಹನುಮಾಕ್ಷಿ ಗೋಗಿ, ಸಂಶೋಧನಾ ಲೇಖನಗಳು, ಪುಟ : ೩೮

೭೭. 'ಕರ್ನಾಟಕ ದರ್ಶನ' ವಿಶೇಷ ಪುರವಣಿ ಪ್ರಜಾವಾಣಿ ದಿನಪತ್ರಿಕೆ ೨೨ನೇ ಏಪ್ರಿಲ್೨೦೧೦

೭೮. ಚನ್ನಬಸಪ್ಪ ಎಸ್ ಪಾಟಿಲ್ ಮತ್ತು ಬಾಲಸುಬ್ರಮಣ್ಯ, ಸಿರಿವಾಳ, ಪುಟ : ೭೬–೮೧

೭೯. ಡಿ.ಎನ್.ಅಕ್ಕಿ, ಸ.ಸಿ, ಪುಟ : ೨೪

೮೦. ಅದೇ, ಪುಟ : ೪

೮೧. ಎಚ್.ಎಸ್.ಗೋಪಾಲರಾವ್, ರಾಷ್ಟ್ರಕೂಟರ ಶಿಲ್ಪಕಲೆ, ಪುಟ : ೨೫

೮೨. ಚನ್ನಬಸಪ್ಪ ಎಸ್ ಪಾಟಿಲ್ ಮತ್ತು ಬಾಲಸುಬ್ರಮಣ್ಯ, ಸಿರಿವಾಳ, ಪುಟ : ೮೫

೮೩. ಡಿ.ಎನ್.ಅಕ್ಕಿ, ಸ.ಸಿ, ಪುಟ : ೧೩

೮೪. ಕೂ.ಸ.ಅಪರ್ಣ, ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ : ೧೦೫

೮೫. ಎಂ.ಕೊಟೇಶ್, ಕ.ಪ್ರಾ.ಇ.ಮ.ಪು.ಅ.ಮ, ಪುಟ : ೭೧

೮೬. ಚನ್ನಬಸಪ್ಪ. ಎಸ್. ಪಾಟೀಲ್, ಕರ್ನಾಟಕದ ಕೋಟೆಗಳು.

ಬಾಹ್ಯ ಪ್ರಪಂಚಕ್ಕೆ ದೇವಾಲಯ ಒಂದು ಕಟ್ಟಡವಾದರೇ ದೇವರ ವಾಸಕ್ಕಾಗಿ ದೇವಾಲಯದ ಮಧ್ಯದಲ್ಲಿ ಗರ್ಭಗೃಹ ನಿರ್ಮಾಣವಾಗುತ್ತಿತ್ತು. ಅಮೂರ್ತವಾದ ದೇವರನ್ನು ಮೂರ್ತರೂಪಕ್ಕಿಳಿಸಿ, ಆ ಮೂರ್ತ ರೂಪವನ್ನು ಜನರ ಮುಂದಿಟ್ಟು ಅವನೇ ದೇವರು ಎಂದು ಜನರಿಗೆ ನಂಬಿಕೆ ಹುಟ್ಟಿಸುವುದು ಸುಲಭದ ಮಾತಲ್ಲ. ಆದರೆ ಶಿಲ್ಪಿಗಳಿಗೆ ಮಾತ್ರ ಆ ಶಕ್ತಿ ಇದೆ.

ಗರ್ಭಗೃಹದೊಳಗಿನ ಮೂರ್ತಿ ಮತ್ತು ಅದಕ್ಕೆ ಸಲ್ಲುವ ಸೇವೆಗಳು, ನೈವೇದ್ಯಗಳು ಅರ್ಚಕರಿಗೆ ಸಂಬಂದಿಸಿದವುಗಳಾಗಿರದೇ ಆಚಾರಮೂರ್ತಿ ಪೂಜೆಗೆ ಮಾತ್ರ ಸೀಮಿತವಾಗಿರುತ್ತದೆ. ನವರಂಗ, ಭಿತ್ತಿ, ಕಂಬಗಳಲ್ಲಿನ ಶಿಲ್ಪಗಳು ಸಾಮಾಜಿಕ ಬದುಕನ್ನು ತಿಳಿಯಲು ಸಹಾಯಕವಾಗುತ್ತವೆ. [೮೭]

## ೫.೧ ಶೈವ ಮೂರ್ತಿಶಿಲ್ಪಗಳು

ಶೈವ ಧರ್ಮೀಯರು ಶಿವನ ಆರಾಧಕರಾಗಿದ್ದು ಶಿವನ ಪ್ರತೀಕವಾಗಿ **'ಲಿಂಗ'**ವನ್ನು ಪೂಜಿಸುತ್ತಾರೆ. ಆದರೂ ಸಹ ಶಿವನ ಭಿನ್ನ ರೂಪಗಳಾದ ಉಮಾಮಹೇಶ್ವರ, ನಟರಾಜ, ಭೈರವ, ಮಾರ್ಕಂಡೇಯಾನುಗ್ರಹ, ಗಂಗಾಧರ ಶಿವ, ಅರ್ಧನಾರೀಶ್ವರ, ವೀರಭದ್ರನೆಂದು ಪೂಜಿಸಲ್ಪಡುತ್ತಾನೆ. ಹಾಗೆಯೇ ನಂದಿ, ಗಣೇಶ ಇತ್ಯಾದಿ ಶಿಲ್ಪಗಳನ್ನು[೮೮] ಶೈವ ಧರ್ಮೀಯರು ಪೂಜಿಸುತ್ತಿರುವುದನ್ನು ನಾವು ನೋಡಬಹುದಾಗಿದೆ.

### ೧. ಮದ್ರಿಕಿ

| | | |
|---|---|---|
| ಸ್ಥಳ | : | ಬಸವೇಶ್ವರ ದೇವಾಲಯ. |
| ಸ್ಮಾರಕ | : | ನಂದಿ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೦–೧೧ ನೇ ಶತಮಾನ. |

ಸ್ಥಿತಿ : ಉತ್ತಮ.

ಮದ್ರಿಕಿ ಗ್ರಾಮದಲ್ಲಿರುವ ಶ್ರೀ ಬಸವೇಶ್ವರ ದೇವಾಲಯದ ಗರ್ಭಗೃಹದಲ್ಲಿ ನಂದಿ ವಿಗ್ರಹವು ಕಪ್ಪು ಶಿಲೆಯಲ್ಲಿ ನಿರ್ಮಾಣಗೊಂಡಿದ್ದು, ಈ ನಂದಿ ವಿಗ್ರಹಕ್ಕೆ ಕೊರಳಲ್ಲಿ ಮತ್ತು ಹಣೆಯ ಮೇಲೆ ಗಂಟೆಯ ಸರಗಳನ್ನು ಅಲಂಕರಿಸಲಾಗಿದೆ. ಮುಖದಲ್ಲಿ ಮಗಡದ ಸರವಿದೆ. ನಂದಿವಿಗ್ರಹದ ಬಲಗಡೆಯ ಕಾಲು ಹೊರಮಡಿಚಿದ್ದು, ಎಡಗಡೆಯ ಕಾಲು ದೇಹದ ಕೆಳಬಾಗದಲ್ಲಿ ಮಡಚಿದೆ. ಹಾಗೆಯೇ ಮೇಲ್ಭಾಭಾಗವನ್ನು ಬಟ್ಟೆಯಿಂದ ಅಲಂಕರಿಸಲಾಗಿದೆ.

**೨. ಸಿರವಾಳ**

ಸ್ಥಳ : ಸಿದ್ಧಲಿಂಗೇಶ್ವರ ದೇವಾಲಯ.

ಸ್ಮಾರಕ : ಉಮಾಮಹೇಶ್ವರ.

ಶೈಲಿ : ಕಲ್ಯಾಣ ಚಾಲುಕ್ಯ.

ಅಭಿಮುಖ : ಪೂರ್ವಾಭಿಮುಖ.

ಕಾಲ : ಕ್ರಿ.ಶ. ೧೧ನೇ ಶತಮಾನ.

ಸ್ಥಿತಿ : ಉತ್ತಮ.

ಮಹೇಶ್ವರನು ನಂದಿಯ ಮೇಲೆ ಆಸೀನನಾಗಿದ್ದು ಉಮೆಯನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡಿದ್ದಾನೆ. ಮಹೇಶ್ವರನು ತನ್ನ ಬಲಗೈಯಲ್ಲಿ ತ್ರಿಶೂಲವನ್ನು ಎಡಗೈಯಲ್ಲಿ ಡಮರುಗವನ್ನು ಹಿಡಿದಿದ್ದಾನೆ. ಕೆಳಗಡೆಯ ಬಲಭಾಗಕ್ಕೆ ಗಣೇಶನು, ಎಡಭಾಗಕ್ಕೆ ಆನೆಯ ಮೇಲೆ ಷಣ್ಮುಖನು ಕುಳಿತು ಬರುತ್ತಿರುವ ಶಿಲ್ಪ ಕಂಡುಬರುತ್ತದೆ.

**೩. ರಸ್ತಾಪುರ**

ಸ್ಥಳ : ಶರಭಲಿಂಗೇಶ್ವರ ದೇವಾಲಯ.

ಸ್ಮಾರಕ : ಲಾಕುಳ.

ಶೈಲಿ : ರಾಷ್ಟ್ರಕೂಟ.

ಅಭಿಮುಖ : ಪೂರ್ವಾಭಿಮುಖ.

ಕಾಲ : ಕ್ರಿ.ಶ. ೦೮-೦೯ನೇ ಶತಮಾನ.

ಸ್ಥಿತಿ : ಮಧ್ಯಮ

ಶರಭಲಿಂಗೇಶ್ವರ ದೇವಾಲಯದ ಮುಂದೆ ಹೊಲವೊಂದರಲ್ಲಿರುವ ಹುಣಸೇಗಿಡದ ಕೆಳಗೆ ಬಂಡೆಗಲ್ಲಿನಲ್ಲಿ ಚಿತ್ರಿಸಿರುವ ಈ ಉಬ್ಬುಶಿಲ್ಪವು ಶಾಂತ ಭಂಗಿಯಲ್ಲಿ ಕುಳಿತಿದ್ದು, ಶಿಲ್ಪದ ಬಲಗೈ ತೊಡೆಯ ಮೇಲೆ ಇದೆ. ಎಡಗೈಯಲ್ಲಿ ದಂಡವನ್ನು ಹಿಡಿದಿರುವುದನ್ನು

ಕಾಣಬಹುದಾಗಿದೆ.

ಇದರ ಪಕ್ಕದಲ್ಲಿ ಇನ್ನೊಂದು ಶಿಲ್ಪವಿದ್ದು ಎರಡು ಬಾಹುಗಳಲ್ಲಿ ಕಮಲದಳಗಳನ್ನು ಹೊಂದಿದ್ದು ಇದು ಸೂರ್ಯಶಿಲ್ಪವಾಗಿರಬಹುದು ಎಂದು ಅಂದಾಜಿಸಲಾಗಿದೆ. ಎದುರಿಗೆ ನಾಗರ ಶಿಲ್ಪವಿದೆ. ಶೈವ ದೇವಾಲಯಗಳ ಗರ್ಭಗೃಹದಲ್ಲಿ ಮೂಲದೇವರಾಗಿ ಸ್ಥಾಪಿಸಲ್ಪಡುವುದು ಶಿವಲಿಂಗ. ಲಿಂಗಗಳಲ್ಲಿ ಸ್ಥಿರ, ಚರ, ಚರಾಚರ, ಮತ್ತು ಬಾಣಲಿಂಗಗಳೆಂಬ ಬಗೆಗಳಿವೆ.

ಶಿವಲಿಂಗವು ೩ ಭಾಗಗಳಿದ್ದು ಕೆಳಗೆ ಭೂಮಿಯಲ್ಲಿ ಸ್ಥಾಪಿಸಲ್ಪಟ್ಟ ಆಧಾರ ಪೀಠವೇ ಬ್ರಹ್ಮಭಾಗ. ಮೇಲೆ ಇರುವ ಭಾಗವೇ ವಿಷ್ಣುಭಾಗ. ಪೀಠದ ಮೇಲಿನ ಲಿಂಗ ರುದ್ರಭಾಗ. ಹೀಗೆ ಬ್ರಹ್ಮ ವಿಷ್ಣು ಮಹೇಶ್ವರರ ಸಂಗಮವೇ ಶಿವಲಿಂಗವಾಗಿದೆ.[೮೯]

ಶಹಾಪುರ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಶೈವ ದೇವಾಲಯಗಳು ಶಿವಲಿಂಗದ ರೂಪದಲ್ಲಿ ಪೂಜಿಸಲ್ಪಡುತ್ತಿದ್ದು, ದೇವಾಲಯಗಳ ಭಿತ್ತಿಗಳಲ್ಲಿ ಶಿವನ ವಿವಿಧ ರೂಪಗಳನ್ನು ಅಲಂಕಾರಿಕವಾಗಿ ಉಮಾಮಹೇಶ್ವರ, ಭೈರವ, ನೃತ್ಯಮೂರ್ತಿ, ಅರ್ಧನಾರೀಶ್ವರ ಇತ್ಯಾದಿ ಶಿಲ್ಪಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಸಿರವಾಳ, ಅಣಬಿ, ಮದ್ರಿಕಿ, ದೋರನಹಳ್ಳಿ ಇತ್ಯಾದಿ ಗ್ರಾಮಗಳಲ್ಲಿ ಶಿವಲಿಂಗವೇ ಪ್ರಧಾನವಾಗಿ ಇರುವಿಕೆಯನ್ನು ನಾವು ಗಮನಿಸಬಹುದಾಗಿದೆ.

### ೫.೨ ವೈಷ್ಣವ ಮೂರ್ತಿಶಿಲ್ಪಗಳು

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವೈಷ್ಣವ ಧರ್ಮಕ್ಕೆ ಪ್ರಾಶಸ್ತ್ಯವಿದ್ದರೂ ದೇವಾಲಯ ನಿರ್ಮಾಣದಲ್ಲಿ ದ್ವಿತೀಯ ಸ್ಥಾನವನ್ನು ನೀಡಿದ್ದುದ್ದನ್ನು ಗಮನಿಸಬಹುದಾಗಿದೆ.
ವೈಷ್ಣವ ಶಿಲ್ಪಗಳು ನಾಲ್ಕು ವಿಧಗಳಲ್ಲಿ ರಚನೆಯಾಗುತ್ತಿದ್ದು ಅವು ಈ ಕೆಳಕಂಡಂತಿವೆ.

೧. **ಸ್ಥಾನಿಕ ಮೂರ್ತಿ** : ಸಮ ಸ್ಥಾನದಲ್ಲಿ ನಿಂತಿರುವ ವಿಷ್ಣುವಿನ ವಿವಿಧ ರೂಪಗಳೆ ಸ್ಥಾನಿಕ ಮೂರ್ತಿಗಳಾಗಿವೆ.

೨. **ಆಸನ ಮೂರ್ತಿ** : ಪೀಠದ ಮೇಲೆ ಪದ್ಮಾಸನ ಅಥವಾ ಅರ್ಧಪರ್ಯಂಕಾಸನದಲ್ಲಿ ಕುಳಿತಿರುವ ವಿಷ್ಣುವಿನ ವಿವಿಧ ರೂಪಗಳ ಶಿಲ್ಪಗಳೆ ಆಸನ ಮೂರ್ತಿಗಳು.

೩. **ಶಯನ ಮೂರ್ತಿ** : ವಿಷ್ಣುವಿನ ಅನಂತಶಯನ ರೂಪದಲ್ಲಿ ಐದು, ಏಳು ಹೆಡೆಗಳ ನಾಗಸರ್ಪದ ಮೇಲೆ ಪವಡಿಸಿರುವಂತೆ ಈ ಶಿಲ್ಪದ ನಿರ್ಮಾಣವಿರುತ್ತದೆ.

೪. **ಅವತಾರ ಮೂರ್ತಿ** : ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದಂತೆ ವಿಭಿನ್ನ ಮೂರ್ತಿಗಳಿದ್ದು,

ಇವು ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಪ್ರತಿನಿಧಿಸುತ್ತವೆ. ಹಾಗೆಯೇ ಕೇಲವೊಮ್ಮೆ ಗರ್ಭಗೃಹ, ಅಂತರಾಳ, ತೋರಣದಲ್ಲಿ, ನವರಂಗದ ಕಂಬಗಳಲ್ಲಿ ದಶಾವತಾರದ ಶಿಲ್ಪಗಳು ಕಂಡುಬರುತ್ತವೆ.[೯೦]

ವೈಷ್ಣವ ದೇವಾಲಯಗಳಲ್ಲಿ ವಿಷ್ಣುವಿಗೆ ಸಂಬಂಧಿಸಿದ ಶಿಲ್ಪಗಳನ್ನು ವಿವಿಧ ರೂಪದಲ್ಲಿ ಪೂಜಿಸುತ್ತಿದ್ದುದನ್ನು ನಾವು ಗಮನಿಸಬಹುದಾಗಿದೆ.

**೧. ಮುದ್ರಿಕೆ**

| | | |
|---|---|---|
| ಸ್ಥಳ | : | ಬಸವೇಶ್ವರ ದೇವಾಲಯ ಹಿಂದೆ. |
| ಸ್ಮಾರಕ | : | ವಿಷ್ಣುವಿನ ಶಿಲ್ಪ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಉತ್ತರಾಭಿಮುಖವಾಗಿ ಇಡಲಾಗಿದೆ. |
| ಕಾಲ | : | ಕ್ರಿ.ಶ. ೧೦–೧೧ನೇ ಶತಮಾನ. |
| ಸ್ಥಿತಿ | : | ಭಗ್ನಗೊಂಡಿದೆ. |

ಬಸವೇಶ್ವರ ದೇವಾಲಯದ ಹಿಂದೆ ಇರುವ ಪಾಲಕಮ್ಮ ಗುಡಿಯ ಮುಂದೆ ಇಟ್ಟಿರುವ ಈ ವೈಷ್ಣವ ಶಿಲ್ಪವು ಕಪ್ಪು ಶಿಲೆಯಲ್ಲಿ ರಚನೆಗೊಂಡಿದ್ದು ಇದು ದಶಾವತಾರಿ ಶಿಲ್ಪವಾಗಿದೆ. ನಿಂತ ಭಂಗಿಯಲ್ಲಿರುವ ಶಿಲ್ಪಕ್ಕೆ ನಾಲ್ಕು ಬಾಹುಗಳಿವೆ. ಮೇಲ್ಭಾಗದಲ್ಲಿ ಶಂಖ ಮತ್ತು ಮುದ್ರೆಯನ್ನು ಹೊಂದಿದ್ದು ಕೆಳಭಾಗದ ಎರಡು ಬಾಹುಗಳು ಭಗ್ನಗೊಂಡಿವೆ. ಪಕ್ಕದಲ್ಲಿ ಲಕ್ಷ್ಮಿ ಇದ್ದು ಈ ಮೂರ್ತಿಯ ಪಾದಗಳಿಗೆ ನಮಸ್ಕರಿಸುತ್ತಿರುವ ಗರುಡನ ಶಿಲ್ಪವು ಮನಮೋಹಕವಾಗಿದೆ. ಮೀನು, ಆಮೆ, ವರಹ ಇತರ ಶಿಲ್ಪಗಳನ್ನು ಕೆತ್ತಿದ್ದು, ಮೂಲ ಶಿಲ್ಪದ ಸುತ್ತಲೂ ವಿಷ್ಣುವಿನ ದಶಾವತಾರದ ಶಿಲ್ಪಗಳು ಕಂಡುಬರುತ್ತವೆ.

**೨. ಮುದ್ರಿಕೆ**

| | | |
|---|---|---|
| ಸ್ಥಳ | : | ಬಸವೇಶ್ವರ ದೇವಾಲಯ. |
| ಸ್ಮಾರಕ | : | ಸೂರ್ಯ ಶಿಲ್ಪ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಉತ್ತರಾಭಿಮುಖ |
| ಕಾಲ | : | ಕ್ರಿ.ಶ. ೯–೧೦ನೇ ಶತಮಾನ. |
| ಸ್ಥಿತಿ | : | ಭಗ್ನಗೊಂಡಿದೆ. |

ಬಸವೇಶ್ವರ ದೇವಾಲಯದಲ್ಲಿರುವ ಈ ಸೂರ್ಯ ವಿಗ್ರಹವು ಪಾರಂಭದಲ್ಲಿ

ಗರ್ಭಗೃಹದಲ್ಲಿದ್ದು ಜೀರ್ಣೋದ್ಧಾರಗೊಂಡ ನಂತರ ಸಭಾಮಂಟಪದ ಬಲಗೋಡೆಯಲ್ಲಿ ಪ್ರತಿಷ್ಠಾಪಿತವಾಗಿದೆ. ಇದು ಕಪ್ಪು ಶಿಲೆಯಲ್ಲಿ ರಚಿತಗೊಂಡಿದ್ದು ಎರಡು ಕೈಯಲ್ಲಿ ಕಮಲದ ಮೊಗ್ಗನ್ನು ಹಿಡಿದಿರುವ ಸದೃಢತೆಯನ್ನು ಸಾರುವ ಸೂರ್ಯನ ಶಿಲ್ಪವು ನಿಂತ ಭಂಗಿಯಲ್ಲಿದೆ. ಸದ್ಯ ಶಿಲ್ಪವು ಮೂರು ಭಾಗಗಳಾಗಿ ಒಡೆದು ಹೋಗಿದ್ದು, ಈ ವಿಗ್ರಹಕ್ಕೆ ನಿತ್ಯವೂ ಪೂಜೆ ನಡೆಯುತ್ತಿದೆ.

**೩. ಸಿರವಾಳ**

ಸ್ಥಳ : ಸಿದ್ಧಲಿಂಗೇಶ್ವರ ದೇವಾಲಯ ಮುಂದೆ.

ಸ್ಮಾರಕ : ವಿಷ್ಣು ಲಕ್ಷ್ಮಿ ಶಿಲ್ಪ.

ಶೈಲಿ : ಕಲ್ಯಾಣ ಚಾಲುಕ್ಯ.

ಅಭಿಮುಖ : ಪೂರ್ವಾಭಿಮುಖ

ಕಾಲ : ಕ್ರಿ.ಶ. ೧ನೇ ಶತಮಾನ.

ಸ್ಥಿತಿ : ಭಗ್ನಗೊಂಡಿದೆ.

ಸಿದ್ಧಲಿಂಗೇಶ್ವರ ದೇವಾಲಯದ ಹೊರಗೋಡೆಯಲ್ಲಿ ಪೂರ್ವಾಭಿಮುಖವಾಗಿ ಇಟ್ಟಿರುವ ಈ ಶಿಲ್ಪವು ವಿಶಿಷ್ಟವಾದ ಲಕ್ಷಣಗಳಿಂದ ಕೂಡಿದೆ. ವಿಷ್ಣು ಲಕ್ಷ್ಮಿವಿಗ್ರಹವು ಭಗ್ನಗೊಂಡಿದ್ದು ಚತುರ್ಬಾಹುಗಳನ್ನು ಹೊಂದಿದೆ. ಮೇಲ್ಬಾಹುಗಳಲ್ಲಿ ಕಮಲ, ನಾಗರ ಶಿಲ್ಪವನ್ನು, ಕೆಳಬಾಹುಗಳಲ್ಲಿ ಗದೆಯನ್ನು, ಇನ್ನೊಂದು ಕೈಯನ್ನು ಸೊಂಟದ ಮೇಲೆ ಇರಿಸಿಕೊಂಡಿದ್ದಾನೆ. ಪಕ್ಕದಲ್ಲಿ ಲಕ್ಷ್ಮಿಯ ವಿಗ್ರಹದಲ್ಲಿ ಬಲಗೈಯನ್ನು ತೊಡೆಯ ಮೇಲ್ಭಾಗದಲ್ಲಿ ಇಟ್ಟುಕೊಂಡಿದ್ದು ಎಡಗೈಯಲ್ಲಿ ಕಮಲದ ಮೊಗ್ಗನ್ನು ಹೊಂದಿದ್ದಾಳೆ. ಮೂರ್ತಿಯು ಭಗ್ನಗೊಂಡಿದ್ದು ಬಾವಿಯ ಪಕ್ಕದಲ್ಲಿ ಇಟ್ಟಿದ್ದಾರೆ.

'ದೇವಾಲಯಗಳಲ್ಲಿ ವೈಷ್ಣವ ವಿಗ್ರಹಗಳು ಕಂಡುಬರುವುದಿಲ್ಲ. ದೇವಾಲಯಗಳ ಭಿತ್ತಿಗಳಲ್ಲಿ ವಿಷ್ಣುವಿನ ವಿವಿಧ ಭಂಗಿಗಳಲ್ಲಿರುವ ದಶಾವತಾರದ ರೂಪಗಳನ್ನು ಕಾಣಬಹುದಾಗಿದೆ.'

## ೫.೩ ಜೈನ ಮೂರ್ತಿಶಿಲ್ಪಗಳು

ಜೈನ ಶಿಲ್ಪಗಳಲ್ಲಿ ಜೈನ ತೀರ್ಥಂಕರರ ಶಿಲ್ಪಗಳೇ ಮುಖ್ಯವಾಗಿವೆ. ಜೈನ ತೀರ್ಥಂಕರರ ಶಿಲ್ಪಗಳಲ್ಲಿ ಹೆಚ್ಚಾಗಿ ವ್ಯತ್ಯಾಸಗಳು ಕಂಡುಬರುವುದಿಲ್ಲ. ೨೪ ತೀರ್ಥಂಕರರ ಶಿಲ್ಪಗಳಲ್ಲಿ ಶಾಂತ ಮುಖ ಮತ್ತು ಧ್ಯಾನನಿರತ ಶಿಲ್ಪಗಳೇ ಹೆಚ್ಚು.

ಜೈನ ಧರ್ಮದಲ್ಲಿ ವ್ಯಕ್ತಿ ಆರಾಧನೆ ಇಲ್ಲ. ಆದರೆ ಗುಣದ ಆರಾಧನೆ ಇದೆ. ತೀರ್ಥಂಕರನನ್ನು ದಿವ್ಯ ವ್ಯಕ್ತಿ ಎಂದು ಆರಾಧಿಸುವುದಿಲ್ಲ. ಆದರೆ ಆ ವ್ಯಕ್ತಿಯಲ್ಲಿರುವ ದಿವ್ಯವಾದ ಗುಣಕ್ಕಾಗಿ, ಚಿತ್ತ ಸ್ಥೈರ್ಯಕ್ಕಾಗಿ ಆರಾಧಿಸುತ್ತಾರೆ. ಪ್ರತಿ ವ್ಯಕ್ತಿಯಲ್ಲಿರುವ ಆತ್ಮವೇ ದೇವರೆಂದು ಕರೆಯಬೇಕು ಎಂದು ಜೈನ ಧರ್ಮ ಹೇಳುತ್ತದೆ. ಜೈನರು ಭೋಗವನ್ನು ನಿರಾಕರಿಸಿದವರಲ್ಲ. ಭೋಗವನ್ನು ಒಪ್ಪಿಕೊಂಡು ವೈರಾಗ್ಯಕ್ಕೆ ಮಹತ್ವ ಕೊಟ್ಟವರಾಗಿದ್ದಾರೆ. ಅವರಲ್ಲಿದ್ದ ಈ ದೃಢ ಸಂಕಲ್ಪ, ಉದಾತ ವಿಚಾರಗಳು ಅವರನ್ನು ಪೂಜಿಸುವಂತೆ ಮಾಡಿವೆ. ಜೈನ ಪರಂಪರೆಯಲ್ಲಿ ಮತಾಚಾರ್ಯರ ಪಾದ ಚಿಹ್ನೆಗಳನ್ನು ಕೆತ್ತಿ ಅದನ್ನು ಪೂಜಿಸುವ ಪರಂಪರೆಯೊಂದು ಪ್ರಾಚೀನ ಕಾಲದಿಂದಲೂ ರೂಡಿಯಲ್ಲಿದ್ದು, ಮೂರ್ತಿಶಿಲ್ಪಕ್ಕೆ ಸ್ಫೂರ್ತಿಕೊಟ್ಟವರಲ್ಲಿ ಜೈನರೇ ಅಗ್ರಗಣ್ಯರಾಗಿದ್ದಾರೆ. ಮೂರ್ತಿ ಶಿಲ್ಪಗಳು ಮೌರ್ಯರ ಕಾಲದಲ್ಲಿ ಪ್ರಚಲಿತಗೊಂಡದ್ದನ್ನು ನಾವು ಗಮನಿಸಬಹುದಾಗಿದೆ.

೧. ಗೋಗಿ

| | | |
|---|---|---|
| ಸ್ಥಳ | : | ಗ್ರಾಮದ ಮದ್ಯದಲ್ಲಿಯ ಬಸದಿ |
| ಸ್ಮಾರಕ | : | ೨೩ನೇ ತೀರ್ಥಂಕರ ಪಾರ್ಶ್ವನಾಥ. |
| ಶೈಲಿ | : | ರಾಷ್ಟ್ರಕೂಟ. |
| ಅಭಿಮುಖ | : | ಪೂರ್ವಾಭಿಮುಖ |
| ಕಾಲ | : | ಕ್ರಿ.ಶ. ೧೦ನೇ ಶತಮಾನ. |
| ಸ್ಥಿತಿ | : | ಉತ್ತಮ. |

ಗ್ರಾಮದ ಮಧ್ಯದಲ್ಲಿರುವ ಜೈನ ಮಂದಿರವು (ಬಸದಿ) ಜಿನನಾಥನ ವಿಗ್ರಹವನ್ನು ಹೊಂದಿದೆ. ೨೩ನೇ ತೀರ್ಥಂಕರ ಪಾರ್ಶ್ವನಾಥನ ಈ ಪ್ರತಿಮೆಯು ಪ್ರಶಾಂತವಾದ ಮತ್ತು ವಿರಕ್ತಭಾವದ ತಪೋಮಗ್ನನಾಗಿ ನಿಂತಿದ್ದು ಆಕರ್ಷಕವಾಗಿದೆ. ಇದು ಕಪ್ಪು ಶಿಲೆಯಲ್ಲಿ ನಿರ್ಮಾಣಗೊಂಡಿದ್ದು [೧] ಪಾರ್ಶ್ವನಾಥನ ಕೆಳಭಾಗದಲ್ಲಿ ಯಕ್ಷ-ಯಕ್ಷಿಣಿಯರ ಪ್ರತಿಮೆಗಳಿವೆ. ಹಾಗೆಯೇ ಪಾರ್ಶ್ವನಾಥನ ಹಿಂದೆ ಏಳು ಹೆಡೆಗಳುಳ್ಳ ಸರ್ಪವು ಹೆಡೆ ತೆರೆದುಕೊಂಡು ನಿಂತಿದ್ದು, ಮೇಲೆ ಕೊಡೆ ಇದೆ. ವಿಗ್ರಹದ ಸುತ್ತಲೂ ಆಲಂಕಾರಿಕವಾಗಿ ಚಿತ್ರಗಳನ್ನು ಕೊರೆಯಲಾಗಿದೆ.

೨. ಗೋಗಿ

| | | |
|---|---|---|
| ಸ್ಥಳ | : | ಪಾರ್ಶ್ವನಾಥ ಮಂದಿರ. |
| ಸ್ಮಾರಕ | : | ೮ನೇ ತೀರ್ಥಂಕರ ಚಂದ್ರನಾಥ. |

| | | |
|---|---|---|
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೧೧ನೇ ಶತಮಾನ. |
| ಸ್ಥಿತಿ | : | ಉತ್ತಮ. |

ಗೋಗಿ ಗ್ರಾಮದ ಪಾರ್ಶ್ವನಾಥ ಮಂದಿರದ ಪಕ್ಕದಲ್ಲಿರುವುದೇ ಚಂದ್ರನಾಥನ ವಿಗ್ರಹ ಪಚ್ಚೆ ಶಿಲೆಯಲ್ಲಿ ಮೂರ್ತಿಯನ್ನು ಆಕರ್ಷಕವಾಗಿ ಕೊರೆಯಲಾಗಿದೆ. ೮ನೇ ತೀರ್ಥಂಕರನಾದ ಚಂದ್ರನಾಥನ ವಿಗ್ರಹದ ಕೆಳಭಾಗದಲ್ಲಿ ಯಕ್ಷ-ಯಕ್ಷಿಣಿಯರ ಪ್ರತಿಮೆಗಳಿವೆ. ತಲೆಯ ಹಿಂದೆ ಪ್ರಭಾ ಮಂಡಲವಿದ್ದು, ಎಡಬಲ ಭುಜಗಳ ಹತ್ತಿರ ಚಾಮರಗಳನ್ನು ಬಿಡಿಸಿದ್ದಾರೆ.[೯೨]

**೩. ಸಿರವಾಳ**

| | | |
|---|---|---|
| ಸ್ಥಳ | : | ಸಿದ್ಧಲಿಂಗೇಶ್ವರ ದೇವಾಲಯದ ಹಿಂದೆ. |
| ಸ್ಮಾರಕ | : | ತೀರ್ಥಂಕರ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಪೂರ್ವಾಭಿಮುಖ. |
| ಕಾಲ | : | ಕ್ರಿ.ಶ. ೯ನೇ ಶತಮಾನ. |
| ಸ್ಥಿತಿ | : | ಉತ್ತಮ. |

ಸಿರವಾಳ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ಸಿದ್ಧಲಿಂಗೇಶ್ವರ ದೇವಾಲಯದ ಹಿಂದೆ ಇರುವ ಚಿಕ್ಕ ಗುಡಿಯಲ್ಲಿ ಈ ಏಕಶಿಲಾ ಶಿಲ್ಪವು ಮನೋಜ್ಞವಾಗಿದ್ದು, ಶಿಲ್ಪವನ್ನು ಕೆಂಪು ಮರಳು ಮಿಶ್ರಿತ ಕಲ್ಲಿನಲ್ಲಿ ಕೆತ್ತಲಾಗಿದೆ. ಈ ಶಿಲ್ಪವು ಶಾಂತ ರೂಪದಲ್ಲಿ, ಧ್ಯಾನಾಸಕ್ತನಾಗಿ ನಿಂತಿರುವ ಭಂಗಿಯಲ್ಲಿದೆ. ತೀರ್ಥಂಕರನ ಹಿಂದೆ ಐದು ಹೆಡೆಗಳ್ಳುಳ್ಳ ಸರ್ಪವು ಅಂಕುಡೊಂಕಾಗಿ ಮೊಳಿಯೊಡೆದ್ದು ಹೆಡೆ ಬಿಚ್ಚಿ ನಿಂತಿದ್ದನ್ನು ಕಾಣಬಹುದಾಗಿದೆ.

**೪. ಚಾರಣಗೆರಾ**

| | | |
|---|---|---|
| ಸ್ಥಳ | : | ಬೆಟ್ಟದ ಪಶ್ಚಿಮ ಭಾಗಕ್ಕೆ ಏಕಶಿಲಾ ಬಂಡೆಯ ಮೇಲೆ. |
| ಸ್ಮಾರಕ | : | ೨೩ನೇ ತೀರ್ಥಂಕರ ಪಾರ್ಶ್ವನಾಥ. |
| ಅಭಿಮುಖ | : | ಪಶ್ಚಿಮಾಭಿಮುಖ. |
| ಸ್ಥಿತಿ | : | ಭಗ್ನಗೊಂಡಿದೆ. |

ಚಾರಣಗೆರಾ ಗ್ರಾಮದ ಪಶ್ಚಿಮ ಭಾಗದ ಬೆಟ್ಟದ ಮೇಲೆ ಈ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ.[೯೩] ಪಾರ್ಶ್ವನಾಥ ಉಬ್ಬುಶಿಲ್ಪವು ನಿಂತ ಭಂಗಿಯಲ್ಲಿದ್ದು, ಈ ಶಿಲ್ಪದ ಹಿಂದೆ

ಎಡಭಾಗಕ್ಕೆ ಯಕ್ಷಿಣಿಯ ಶಿಲ್ಪವಿದ್ದು, ಅದು ನಿಸರ್ಗದ ಹೊಡೆತಕ್ಕೆ ಹಾಳಾಗುತ್ತಿರುವುದನ್ನು ಗಮನಿಸಬಹುದಾಗಿದೆ.

### ೫.೪ ಶಾಕ್ತ ಮೂರ್ತಿಶಿಲ್ಪಗಳು

ಶಕ್ತಿ ಸ್ವರೂಪಿಣಿಯಾದ ದೇವಿಯ ಮೂರ್ತಿಗಳನ್ನು ಶಾಕ್ತ ದೇವತೆ ಅಥವಾ ಶಾಕ್ತ ಶಿಲ್ಪಗಳೆಂದು ಕರೆಯುತ್ತಾರೆ.

ಸೃಷ್ಟಿಕರ್ತ ಬ್ರಹ್ಮನಾದರೆ, ಸ್ಥಿತಿಕರ್ತ ವಿಷ್ಣು. ಪ್ರಳಯಕರ್ತ ಶಿವನಾಗಿದ್ದಾನೆ. ಆದರೆ ಸಮಸ್ತ ಸೃಷ್ಟಿಗೆ ಮೂಲಧಾರಿ ಶಕ್ತಿಯೇ ಶಾಕ್ತ ಮೂರ್ತಿಗಳಾಗಿವೆ. ಶಕ್ತಿ ಸ್ವರೂಪಿಯಾದ ದೇವಿಯನ್ನು ವಿವಿಧ ರೂಪದಲ್ಲಿ ಆರಾಧಿಸುತ್ತಿದ್ದು, ಐಶ್ವರ್ಯಕ್ಕೆ ಲಕ್ಷ್ಮಿಯಾದರೆ, ಜ್ಞಾನಕ್ಕೆ (ಸತ್ಯಗುಣ) ಸರಸ್ವತಿಯನ್ನು, ದುಷ್ಟಶಕ್ತಿಗಳ ಸಂಹಾರಕ್ಕಾಗಿ ಮಹಾಕಾಳಿಯನ್ನು (ರೌದ್ರಕಾಳಿ) ಹೀಗೆ ವಿವಿಧ ರೂಪದಲ್ಲಿ ಪೂಜಿಸುತ್ತಿರುವುದನ್ನು ನೋಡಬಹುದಾಗಿದೆ.[೪]
ಶಾಕ್ತ ಮೂರ್ತಿಗಳು ೯ ಅಂಗಗಳನ್ನು ಒಳಗೊಂಡಿದ್ದನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

೧. ನ್ಯಾಸ – ರೂಪ

೨. ಅಲಂಕಾರ – ಆಭರಣ, ವಸ್ತು, ಕೇಶ.

೩. ಮುದ್ರೆ – ಹಸ್ತಮುದ್ರೆ

೪. ಆಯುಧ – ದೇವತೆಗಳ ಕೈಯಲ್ಲಿರುವ ಆಯುಧ

೫. ಬಾಹು – ಕೈಗಳು

೬. ವಾಹನ

೭. ಉಪದೇವ – ಪ್ರಧಾನ ದೇವತೆಯ ಜೊತೆ ತೋರಿಸಲ್ಪಡುವ ಇತರ ಕಡಿಮೆ ಮಹತ್ವದ ದೇವತೆಗಳು, ಪುರುಷ ದೇವತೆಗಳ ಸಂದರ್ಭದಲ್ಲಿ ಅವರ ಸ್ತ್ರೀ ದೇವತೆಗಳು.

೮. ಅರಿ – ದೇವತೆಯ ವೈರಿ.

೯. ಸ್ತುವಕ

ಹೀಗೆ ಮೂರ್ತಿಗಳು ರೂಪಗೊಳುತ್ತವೆ.

**೧. ಮದ್ರಿಕೆ**

| | | |
|---|---|---|
| ಸ್ಥಳ | : | ಬಸವೇಶ್ವರ ದೇವಾಲಯ. |
| ಸ್ಮಾರಕ | : | ಮಹಿಷಾಸುರ ಮರ್ದಿನಿ. |
| ಶೈಲಿ | : | ಕಲ್ಯಾಣ ಚಾಲುಕ್ಯ. |
| ಅಭಿಮುಖ | : | ಉತ್ತರಾಭಿಮುಖ. |

ಕಾಲ : ಕ್ರಿ.ಶ. ೧೧ನೇ ಶತಮಾನ.

ಸ್ಥಿತಿ : ಭಗ್ನಗೊಂಡಿದೆ.

ಬಸವೇಶ್ವರ ದೇವಾಲಯದ ಸಭಾಮಂಟಪದ ಬಲಗೋಡೆಯಲ್ಲಿರುವ ಈ ಶಿಲ್ಪವು ನಾಲ್ಕು ಬಾಹುಗಳನ್ನು ಹೊಂದಿದ್ದು, ಮೇಲ್ಭಾಗದ ಬಲಗೈಯಲ್ಲಿ ಚಕ್ರವನ್ನು ಹಿಡಿದಿದ್ದು ಉಳಿದ ಬಾಹುಗಳು ಭಗ್ನಗೊಂಡಿವೆ. ಅವಳ ಕಾಲಡಿಯಲ್ಲಿ ಕೋಣದ ತಲೆ ಬಿದ್ದಿದ್ದು, ತನ್ನ ವಾಹನವಾದ ಸಿಂಹದ ಮೇಲೆ ಒಂದು ಕಾಲನ್ನು ಇನ್ನೊಂದನ್ನು ಅಸುರನ ದೇಹದ ಮೇಲೆ ಇಟ್ಟಿರುವುದನ್ನು ನೋಡಬಹುದಾಗಿದೆ.

ಈ ದೇವಾಲಯದಲ್ಲಿ ವಿಗ್ರಹವು ನಿತ್ಯ ಪೂಜೆಗೆ ಒಳಪಡುತ್ತಿದೆ.

**೨. ಮದ್ರಿಕಿ**

ಸ್ಥಳ : ಹಳ್ಳದ ಎಲ್ಲಮ್ಮ ದೇವಾಲಯ ಮುಂದೆ.

ಸ್ಮಾರಕ : ಸಪ್ತ ಮಾತೃಕೆಯ ಶಿಲ್ಪ.

ಶೈಲಿ : ಕಲ್ಯಾಣ ಚಾಲುಕ್ಯ.

ಅಭಿಮುಖ : ಉತ್ತರಾಭಿಮುಖ.

ಕಾಲ : ಕ್ರಿ.ಶ. ೯ನೇ ಶತಮಾನ.

ಸ್ಥಿತಿ : ಮಧ್ಯಮ.

ಗ್ರಾಮದ ಹಿಂದೆ ಸ್ವಲ್ಪ ದೂರದಲ್ಲಿ ಹಳ್ಳದ ಪಕ್ಕದಲ್ಲಿರುವ ಹಳ್ಳದ ಎಲ್ಲಮ್ಮ ದೇವಾಲಯದ ಮುಂದಿರುವ ಈ ಸಪ್ತಮಾತೃಕೆಯ ಶಿಲ್ಪವಿದ್ದು, ಸ್ಥಳೀಯರು ಅದನ್ನು ಬಾಣತಿಕಲ್ಲು ಎಂದು ಕರೆಯುತ್ತಾರೆ. ಈ ಸಪ್ತಮಾತೃಕೆಯ ಶಿಲ್ಪವು ಅಧಿಷ್ಠಾನದ ಪಟ್ಟಿಕೆಯ ಮೇಲೆ ಕುಳಿತ ಭಂಗಿಯಲ್ಲಿರುವ ಶಿಲ್ಪಗಳಾಗಿವೆ. ಈ ಶಿಲ್ಪದ ಪ್ರಾರಂಭದಲ್ಲಿ ವೀರಭದ್ರನ ಶಿಲ್ಪ ನಂತರ ಬ್ರಾಹ್ಮಿಣಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿ ಜೊತೆಗೆ ಗಣೇಶನ ಶಿಲ್ಪಗಳು ಇವೆ.

**೩. ಶಹಾಪುರ.**

ಸ್ಥಳ : ಕೋಟೆಯ ಮುಂದೆ.

ಸ್ಮಾರಕ : ಚಾಮುಂಡೇಶ್ವರಿ.

ಶೈಲಿ : ರಾಷ್ಟ್ರಕೂಟ.

ಅಭಿಮುಖ : ಪೂರ್ವಾಭಿಮುಖ.

ಕಾಲ : ಕ್ರಿ.ಶ. ೮ನೇ ಶತಮಾನ.

ಸ್ಥಿತಿ : ಉತ್ತಮ.

ಶಹಾಪುರ ದಕ್ಷಿಣದಲ್ಲಿಯ ಹೊಲದಲ್ಲಿ ಉಳುಮೆ ಮಾಡುವ ಸಂದರ್ಭದಲ್ಲಿ ದೊರೆತ ೮ನೇ ಶತಮಾನದ ಚಾಮುಂಡೇಶ್ವರಿ ವಿಗ್ರಹವು ೧೮ ಕೈಗಳನ್ನು ಹೊಂದಿದ್ದು. ಕಪಾಲ, ಶೂಲ, ವರದ, ಅಭಯ ಹಸ್ತ, ರುಂಡಮಾಲೆ, ನಾಗರ ಹೆಡೆ, ಬಿಲ್ಲು ಬಾಣಗಳನ್ನು ಹೊಂದಿರುವುದನ್ನು ಗಮನಿಸಬಹುದಾಗಿದೆ.

ವಿಷ್ಣು ಧರ್ಮೋತ್ತರ ಪುರಾಣದ ಪ್ರಕಾರ ಈಕೆ ಶವದ ಮೇಲೆ ಆಸೀನಳಾಗಿರುತ್ತಾಳೆಂದು ಉಲ್ಲೇಖಿಸಲಾಗಿದ್ದು,[೫] ಕಪ್ಪು ಶಿಲೆಯಲ್ಲಿ ರಚನೆಗೊಂಡ ಈ ವಿಗ್ರಹವು ಆಕರ್ಷಕವಾಗಿದ್ದು ನೋಡಲು ಬಹು ಸುಂದರವಾಗಿದೆ.

**೪. ಗಜಲಕ್ಷ್ಮಿ**

ಪದ್ಮಾಸನದಲ್ಲಿ ಕಮಲ ಪೀಠದ ಮೇಲೆ ಕುಳಿತಿರುವ ಲಕ್ಷ್ಮಿಯ ಎರಡು ಬದಿಯಲ್ಲಿ ಆನೆಗಳಿದ್ದು, ಇವು ಸೊಂಡಿಲಿನಿಂದ ನೀರನ್ನು ಅಭಿಷೇಕ ಮಾಡಿದಂತೆ ತೋರುತ್ತಿವೆ. ಕಮಲವು ನೀರಿನ ಮೇಲೆ ಸ್ವಲ್ಪ ಇರುವುದು ಕಾಣುತ್ತದೆ.

ಈ ರೀತಿಯ ಗಜಲಕ್ಷ್ಮಿಯ ಶಿಲ್ಪಗಳು ಸಿರವಾಳ, ಅಣಬಿ, ಮದ್ರಿಕೆ, ಗೋಗಿ ಗ್ರಾಮಗಳ ದೇವಾಲಯಗಳಲ್ಲಿ ಕಂಡುಬರುತ್ತವೆ. ಶಕ್ತಿ ಸ್ವರೂಪಿಯಾದ ದೇವಿಯ ವಿವಿಧ ರೂಪಗಳನ್ನು ದೇವಾಲಯದ ಭಿತ್ತಿಗಳಲ್ಲಿ ಪಾರ್ವತಿ, ಉಮೆ, ಸರಸ್ವತಿ, ಮಹಾಕಾಳಿ ಇತ್ಯಾದಿ ರೂಪಗಳಲ್ಲಿ ಚಿತ್ರಿಸಿದ್ದಾರೆ.

## ೫.೫ ನಿಸರ್ಗ ನಿರ್ಮಿತ ಬುದ್ಧ ಮಲಗಿದ ದೃಶ್ಯ

ಶಹಾಪುರದಿಂದ ಗುಲಬರ್ಗಾಕ್ಕೆ ಹೊರಡುವ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಂತೆ ಕೆ.ಪಿ.ಟಿ.ಸಿ.ಎಲ್ ಕಛೇರಿ ಹತ್ತಿರ ಕಾಣಸಿಗುವ ನಿಸರ್ಗ ನಿರ್ಮಿತ ಬುದ್ಧ ಮಲಗಿದ ದೃಶ್ಯ ಪ್ರಕೃತಿಯ ಅದ್ಭುತ ಸೃಷ್ಟಿಯೇ ಸರಿ. ಜಗಕ್ಕೆಲ್ಲ ಶಾಂತಿಯನ್ನು ಬೋಧಿಸಿ ವಿಶ್ರಾಂತಿಗಾಗಿ ಬಂದು ವಿಹರಿಸಿದನೇನೋ ಎನ್ನುವಂತೆ ಮಲಗಿರುವ ಬುದ್ಧನ ಚಿತ್ರ ನಿಜಕ್ಕೂ ಅದ್ಭುತ ಬುದ್ಧನ ತಿಳಿನಗೆ, ನೀಳನಾಸಿಕ, ಗುಂಗುರು ಕೂದಲು ಹೊಟ್ಟೆಯ ಮೇಲೆ ಕೈಯಿಟ್ಟುಕೊಂಡು ಮಲಗಿದಂತ್ತಿರುವ ಈ ದೃಶ್ಯ ನಿಜಕ್ಕೂ ಮನೋಹರವಾಗಿದೆ.

**ಟಿಪ್ಪಣಿ**

೮೭. ಎಚ್.ಎಸ್.ಗೋಪಾಲರಾವ್, ರಾಷ್ಟ್ರಕೂಟರ ಶಿಲ್ಪಕಲೆ, ಪುಟ : ೩೨

೮೮. ಎಚ್.ಎಸ್.ಗೋಪಾಲರಾವ್, ರಾಷ್ಟ್ರಕೂಟರ ಶಿಲ್ಪಕಲೆ, ಪುಟ : ೩೩

೮೯. ಕರುಣಾ ವಿಜಯೇಂದ್ರ, ಕಲ್ಯಾಣ ಚಾಲುಕ್ಯ ಶಿಲ್ಪಕಲೆ, ಪುಟ : ೨೫

೯೦. ಕರುಣಾ ವಿಜಯೇಂದ್ರ, ಕಲ್ಯಾಣ ಚಾಲುಕ್ಯ ಶಿಲ್ಪಕಲೆ, ಪುಟ : ೩೨

೯೧. ಡಿ.ಎನ್.ಅಕ್ಕಿ, ಸ.ಸಿ, ಪುಟ : ೪

೯೨. ಡಿ.ಎನ್.ಅಕ್ಕಿ, ಸ.ಸಿ, ಪುಟ : ೪

೯೩. ಡಿ.ಎನ್.ಅಕ್ಕಿ, ಸ.ಸಿ, ಪುಟ : ೮

೯೪. ಕರುಣಾ ವಿಜಯೇಂದ್ರ, ಕಲ್ಯಾಣ ಚಾಲುಕ್ಯ ಶಿಲ್ಪಕಲೆ, ಪುಟ : ೪೫

೯೫. ಕರುಣಾ ವಿಜಯೇಂದ್ರ, ಕಲ್ಯಾಣ ಚಾಲುಕ್ಯ ಶಿಲ್ಪಕಲೆ, ಪುಟ : ೫೩

## ಉಪಸಂಹಾರ

'ಶಹಾಪುರ ಪರಿಸರದ ಶಾಸನ ಮತ್ತು ದೇವಾಲಯಗಳ ಸಾಂಸ್ಕೃತಿಕ ಅಧ್ಯಯನ'ವು ಶಹಾಪುರ ನಗರದ ಜೊತೆಗೆ ಸಿರವಾಳ, ಅಣಬಿ, ದೋರನಹಳ್ಳಿ, ರಸ್ತಾಪುರ, ಸಗರ, ಭೀಮರಾಯನಗುಡಿ, ಮದ್ರಿಕಿ ಮತ್ತು ಗೋಗಿ ಗ್ರಾಮಗಳ ವ್ಯಾಪ್ತಿಯನ್ನು ಒಳಗೊಂಡಿರುತ್ತದೆ. ಈ ಗ್ರಾಮಗಳ ಪರಿಸರದಲ್ಲಿ ಕಂಡುಬಂದ ಶಾಸನಗಳು ಮತ್ತು ದೇವಾಲಯಗಳನ್ನು ಅಭ್ಯಸಿಸಿ ಸಂಶೋಧನೆಯ ಮೂಸೆಯಲ್ಲಿ ದೊರೆತ ಮಾಹಿತಿಗಳ ಸಹಾಯದಿಂದ ಸಂಪ್ರಬಂಧವನ್ನು ರಚಿಸಿದ್ದೇನೆ.

ಈ ಭಾಗದಲ್ಲಿ ದೊರೆತ ಶಾಸನಗಳು ಐತಿಹಾಸಿಕವಾಗಿ ತುಂಬಾ ಮಹತ್ವದ್ದಾಗಿವೆ. ಆದರೆ ಅವುಗಳನ್ನು ಅಭ್ಯಸಿಸಿದ ವಿದ್ವಾಂಸರ ಸಂಖ್ಯೆ ತೀರಾ ವಿರಳ. ಕೆಲ ಆಸಕ್ತ ವಿದ್ವಾಂಸರ ವೈಯಕ್ತಿಕ ಮತ್ತು ಅಕಾಡೆಮಿಕ್ ಅಧ್ಯಯನದಿಂದಾಗಿ ಕೆಲ ಶಾಸನಗಳು ರಕ್ಷಿಸಲ್ಪಟ್ಟಿದ್ದು ಅವುಗಳ ಅಧ್ಯಯನ ಕೈಗೊಳ್ಳಲಾಗಿದೆ. ಮಾಹಿತಿ ಹಾಗೂ ಐತಿಹಾಸಿಕ ಮಹತ್ವದ ಈ ಸ್ಥಳಗಳ ಕುರಿತು ಜನಸಾಮಾನ್ಯರಲ್ಲಿ ಅರಿವಿಲ್ಲದ್ದರಿಂದಾಗಿ ಈ ಪರಿಸರದಲ್ಲಿ ಕಂಡುಬರುವ ಭವ್ಯ ವಾಸ್ತುಶಿಲ್ಪವನ್ನು ಹೊಂದಿರುವ ಅದೆಷ್ಟೋ ದೇವಾಲಯಗಳು ಇಂದು ಹಾಳು ಸುರಿಯುತ್ತಿವೆ. ಅನೈತಿಕ ಚಟುವಟಿಕೆಗಳ ಆಗರವಾಗಿವೆ. ಅದಕ್ಕೆ ಸಾಕ್ಷಿ ಎಂಬಂತೆ ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳು ಸಿರವಾಳ, ಅಣಬಿ, ಮದ್ರಿಕಿ ಗ್ರಾಮಗಳಲ್ಲಿ ಕಂಡುಬರುತ್ತಿದ್ದು, ಅವುಗಳನ್ನು ಸ್ಥಳೀಯರು ತಮ್ಮ ಸ್ವಂತ ಉಪಯೋಗಗಳಿಗಾಗಿ ಬಳಸುತ್ತಿದ್ದಾರೆ. ಸ್ಥಳೀಯ ಜನತೆ ಅವುಗಳ ಬಗ್ಗೆ ತೋರಿಸಿದ ನಿರ್ಲಕ್ಷ್ಯತನದಿಂದಾಗಿ ಅವು ದನಕರುಗಳ, ನಾಯಿಗಳ ವಾಸಕ್ಕಾಗಿ ಉಪಯೋಗವಾಗುತ್ತಿವೆ. ಸಾಧು ಸಂತರ, ಉಂಡಾಡಿಗಳ ಬಿಡಾರವಾಗಿವೆ. ಅವುಗಳಿಗೆ ಸೂಕ್ತ ರಕ್ಷಣೆ ಇಲ್ಲದ ಕಾರಣ ಶಾಸನ ಮತ್ತು ದೇವಾಲಯಗಳು ವಿನಾಶದ ಅಂಚಿನಲ್ಲಿರುವುದು ಕಂಡುಬರುತ್ತದೆ.

ಇಲ್ಲಿನ ಬಹಮನಿ ಮತ್ತು ಆದಿಲ್ ಶಾಹಿಗಳ ವಾಸ್ತುಶಿಲ್ಪವು ನೇಪಥ್ಯಕ್ಕೆ ಸರಿಯುತ್ತಿರುವುದನ್ನು ಕಾಣಬಹುದು. ಇವುಗಳಿಗೆ ಸೂಕ್ತ ರಕ್ಷಣೆ ಇಲ್ಲದ ಕಾರಣ ಇವು

ವಿನಾಶದ ಅಂಚಿಗೆ ಬಂದು ತಲುಪಿವೆ. ಹಾಗೇ ಮುಂದುವರಿದರೆ ಕೆಲವೇ ವರ್ಷಗಳಲ್ಲಿ ಸಂಪೂರ್ಣವಾಗಿ ನಾಶವಾಗಬಹುದು.

ಇಲ್ಲಿನ ಶಾಸನಗಳ ಮಹತ್ವ ಅರಿಯದ ಸ್ಥಳೀಯ ಜನತೆ ಅವುಗಳನ್ನು ಕಟ್ಟಡ ಅಡಿಪಾಯಕ್ಕೆ, ದನಕರುಗಳನ್ನು ಕಟ್ಟಲು ಬಳಸುತ್ತಿದ್ದಾರೆ. ವೀರನ ಪ್ರತೀಕವಾಗಿ ನಿಲ್ಲಿಸುತ್ತಿದ್ದ ವೀರಗಲ್ಲುಗಳು ಊರ ಹಿಂದೆ ಅನಾಥವಾಗಿ ಬಿದ್ದಿವೆ. ಇದರಿಂದ ಮಹತ್ವದ ಐತಿಹಾಸಿಕ ದಾಖಲೆಗಳು ಕಣ್ಮರೆಯಾಗುತ್ತಿರುವುದನ್ನು ಕಾಣಬಹುದು.

ಮೂರ್ತಿಶಿಲ್ಪಗಳು ದೇವಾಲಯದ ಗರ್ಭಗೃಹದಲ್ಲಿ ಪೂಜಿಸಲ್ಪಡುತ್ತಿದ್ದವು. ಭಗ್ನವಾದ ನಂತರ ಅವುಗಳಿಗೆ ಸೂಕ್ತ ರಕ್ಷಣೆ ಇಲ್ಲದ ಹಾಗೆ ಬಿಟ್ಟಿರುವುದು ವಿಪರ್ಯಾಸದ ಸಂಗತಿಯಾಗಿದೆ.

ಎರಡನೇ ಅಧ್ಯಾಯದಲ್ಲಿ ಶಹಾಪುರ ಪ್ರದೇಶವು ಹಲವು ರಾಜ ಮನೆತನಗಳ ಆಡಳಿತದ ಬಗ್ಗೆ ವಿವರಿಸಲಾಗಿದೆ. ಇಲ್ಲಿನ ರಾಜಮನೆತನಗಳು ಮೌರ್ಯರಿಂದ ಹಿಡಿದು ಆದಿಲ್ ಶಾಹಿ ಸುಲ್ತಾನರವರೆಗೆ ಉತ್ತಮವಾದ ರಾಜಕೀಯ ವ್ಯವಸ್ಥೆಯನ್ನು ಕಂಡಿದ್ದವು. ಮೊಗಲ್ ಸಾಮ್ರಾಟ ಔರಂಗಜೇಬನ ಕ್ರೌರ್ಯಕ್ಕೆ ಶಹಾಪುರ ಕೋಟೆಯು ನಾಶವಾಯಿತು. ಅಂದು ಮೊಗಲ್‌ರ ಕ್ರೌರ್ಯಕ್ಕೆ ಕೋಟೆ ಬಲಿಯಾದರೇ ಇಂದು ನಿಧಿಗಳ್ಳರ ಆಸೆಗೆ ಒಳಗಾಗುತ್ತಿರುವುದು ವಿಪರ್ಯಾಸವೇ ಸರಿ.

ವೇದಗಳ ಕಾಲದಲ್ಲಿ ಚತುರ್ವರ್ಣ ವ್ಯವಸ್ಥೆಯು ಈ ಪ್ರದೇಶದಲ್ಲಿ ಮುಂದುವರಿದಿತ್ತು. ಇಲ್ಲಿ ಶೂದ್ರರು ಹೆಚ್ಚಾಗಿ ಕಂಡುಬರುತ್ತಾರೆ. ಮುಂದೆ ಆಧುನಿಕತೆಯ ಹೊಡೆತಕ್ಕೆ ಸಿಲುಕಿ ಹಲವಾರು ವೃತ್ತಿವಾರು ಉಪಜಾತಿಗಳು ಹುಟ್ಟಿಕೊಂಡವು. ಇಲ್ಲಿನ ಜನ ಹಬ್ಬ ಹರಿದಿನಗಳಿಗೆ, ನಂಬಿಕೆ, ಸಂಪ್ರದಾಯಗಳಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದರು. ಜೊತೆಗೆ ಜನಕಲ್ಯಾಣ ಕಾರ್ಯಗಳನ್ನು ಮಾಡುತ್ತಿದ್ದರು. ಆರ್ಥಿಕವಾಗಿ ಶಹಾಪುರವು ಸುಭಿಕ್ಷವಾಗಿತ್ತು. ಕೃಷಿ ಇಲ್ಲಿ ಪ್ರಧಾನ ಕಸುಬಾಗಿತ್ತು. ಕೃಷಿಯು ನೀರಾವರಿಯ ಮೂಲಕ ನಡೆಯುತ್ತಿದ್ದುದ್ದರಿಂದ ವಾರ್ಷಿಕವಾಗಿ ಎರಡು ಬೆಳೆಗಳನ್ನು ಬೆಳೆಯುತ್ತಿದ್ದರು. ಕೃಷಿಯ ಜೊತೆಗೆ ಪಶುಸಂಗೋಪನೆಯನ್ನು ಮಾಡುತ್ತಿದ್ದರು. ಈ ಪ್ರದೇಶದಲ್ಲಿ ವರ್ತಕರು ಮತ್ತು ವರ್ತಕರ ಸಂಘಗಳು ಹೆಚ್ಚಾಗಿ ಕಂಡುಬರುತ್ತವೆ. ರೈತರು ತಾವು ಬೆಳೆದ ಬೆಳೆಗಳಿಗೆ ಇಲ್ಲಿ ಉತ್ತಮವಾದ ಮಾರುಕಟ್ಟೆಗಳಿದ್ದವು. ಇಲ್ಲಿನ ಜನತೆ ಹಲವು ಬಗೆಯ ತೆರಿಗೆಗಳನ್ನು ಪಾವತಿ ಮಾಡುತ್ತಿದ್ದರು. ಬೌದ್ಧ, ಜೈನ, ಶೈವ, ವೈಷ್ಣವ, ಮುಸ್ಲಿಮರು ಅನ್ಯೂನ್ಯೇತೆಯಿಂದ ಒಂದೇ ಜನಾಂಗದವರಂತೆ ಸಹ ಬಾಳ್ವೆಯನ್ನು ನಡೆಸುತ್ತಿದ್ದರು ಎಂದು ತಿಳಿಯುತ್ತದೆ.

ಮೂರನೇ ಅಧ್ಯಾಯದಲ್ಲಿ ಈ ಭಾಗದಲ್ಲಿ ದೊರೆತ ಶಾಸನಗಳ ಪ್ರಾಮುಖ್ಯತೆಯನ್ನು

ವಿವರಿಸಲಾಗಿದೆ. ಇಲ್ಲಿ ದೊರೆತಿರುವ ಶಾಸನಗಳಲ್ಲಿ ಅಡಕವಾಗಿರುವ ವಿಷಯಗಳಿಂದ ಶಹಾಪುರವು ಕಲ್ಯಾಣ ಚಾಲುಕ್ಯರ ಆಡಳಿತವನ್ನು ಹೆಚ್ಚಾಗಿ ಕಂಡಿರುವುದು ತಿಳಿಯುತ್ತದೆ. ಈ ಪ್ರದೇಶದಲ್ಲಿ ಸೆಟ್ಟಿಗರ ಗುಂಪಿನ ನಾಯಕನ ಸೇವಕನು ಜನಕಲ್ಯಾಣಕ್ಕಾಗಿ ಬಾವಿಯನ್ನು ತೊಡಿಸಿದ ನೆನಪಿಗಾಗಿ ಶಾಸನವನ್ನು ಬರೆಸಲಾಗಿದೆ. ಇದರಿಂದ ಸೇವಕರು ಸಹ ಜನಕಲ್ಯಾಣ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು ಎಂದು ತಿಳಿಯಲು ಸಹಕಾರಿಯಾಗುತ್ತದೆ. ಇನ್ನೊಂದು ಶಾಸನವು ಯುದ್ಧದ ಸಂದರ್ಭದಲ್ಲಿ ತಂದೆಯ ಮರಣದ ಸುದ್ದಿಯನ್ನು ಕೇಳಿ ನಡಿಹಾಳ ಗ್ರಾಮದಲ್ಲಿ 'ಆರನೇ ವಿಕ್ರಮಾದಿತ್ಯನು' ಪಟ್ಟ ಕಟ್ಟಿಕೊಂಡನು ಎಂಬುದನ್ನು ಇಲ್ಲಿನ ಶಾಸನ ವಿವರಿಸುತ್ತದೆ. ಅದೇ ರೀತಿ ಮದ್ರಿಕಿ ಶಾಸನವು 'ಏತಗಿರಿ'ಯನ್ನು ಕಲ್ಯಾಣ ಚಾಲುಕ್ಯರು ಎರಡನೇ ರಾಜಧಾನಿಯಾಗಿತ್ತು ಎಂಬುದನ್ನು ತಿಳಿಯಲು ಸಹಾಯಕವಾಗುತ್ತದೆ. ಅಲ್ಲದೆ ಮಾಂಡಳಿಕರು ದೊರೆಯಷ್ಟೇ ಸಮರ್ಥರಾಗಿರುತ್ತಿದ್ದರು ಎಂಬುದನು ತಿಳಿಸುತ್ತದೆ.

ಗುಲಬರ್ಗಾ ಜಿಲ್ಲೆಯ ಶಹಾಪುರ ಪ್ರದೇಶದಲ್ಲಿ ಎರಡನೇ ಅತಿ ಹೆಚ್ಚು ಪರ್ಶಿಯನ್ ಶಾಸನಗಳು ದೊರೆತಿವೆ (ಒಟ್ಟು ೩೩ ಪರ್ಶಿಯನ್ ಶಾಸನಗಳು). ಇಲ್ಲಿ ದಾನ ಶಾಸನಗಳು ಅಧಿಕವಾಗಿ ಕಂಡುಬರುತ್ತವೆ. ಇದರಿಂದ ದಾನಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಗಿತ್ತು ಎಂದು ತಿಳಿಯಬಹುದು. ವೀರಗಲ್ಲುಗಳು ಪ್ರಾದೇಶಿಕವಾಗಿ ಹೆಚ್ಚಾಗಿ ಕಂಡುಬರುವುದಿಲ್ಲ. ಮಹಾಸತಿಗಲ್ಲು ಮತ್ತು ನಿಷಧಿಗಲ್ಲುಗಳು ತೀರಾ ವಿರಳವಾಗಿದ್ದು ಇವುಗಳ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿರುವುದಿಲ್ಲ.

ನಾಲ್ಕನೇ ಅಧ್ಯಾಯದಲ್ಲಿ ಇಲ್ಲಿನ ದೇವಾಲಯಗಳಲ್ಲಿ ಶೈವ ದೇವಾಲಯಗಳ ಸಂಖ್ಯೆ ಅಧಿಕವಾಗಿದ್ದು, ಇವು ಅಗ್ರಹಾರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದ ಬಗ್ಗೆ ವಿವರಿಸಲಾಗಿದೆ. ಅಣಬಿ, ಮದ್ರಿಕಿ ಗ್ರಾಮಗಳಲ್ಲಿನ ದೇವಾಲಯಗಳು ಇದಕ್ಕೆ ನಿದರ್ಶನವಾಗಿವೆ. ಅಣಬಿಯಲ್ಲಿನ ಕುಂಬಾರ ಶಾಲೆಯಲ್ಲಿ ಗರ್ಭಗೃಹಗಳು ಕಂಡುಬರುವುದರಿಂದ ದೇವಾಲಯಗಳು ವಿದ್ಯಾಭ್ಯಾಸವನ್ನು ಸಹ ಪೋಷಣೆ ಮಾಡುತ್ತಿದ್ದವು ಎಂದು ತಿಳಿದುಬರುತ್ತದೆ. ಸಿರವಾಳ ಗ್ರಾಮದಲ್ಲಿ ೨೨ಕ್ಕೂ ಹೆಚ್ಚು ದೇವಾಲಯಗಳಿವೆ, ಮತ್ತು ೨೦ಕ್ಕೂ ಹೆಚ್ಚು ಮಠಗಳಿವೆ. ಇದು ಚಾಲುಕ್ಯರ ಆಳ್ವಿಕೆಯ ಸಂದರ್ಭದಲ್ಲಿ ವಾಸ್ತುಶಿಲ್ಪದ ತವರಾಗಿತ್ತು ಎಂದು ಹೇಳಬಹುದು. ಇಲ್ಲಿನ ದೇವಾಲಯಗಳ ಗರ್ಭಗೃಹದ ನಿರ್ಮಾಣದಲ್ಲಿ ಮತ್ತು ದ್ವಾರಗಳ ರಚನೆಯಲ್ಲಿ ಹೊಯ್ಸಳರಂತೆ ಸೂಕ್ಷ್ಮ ಕೆತ್ತನೆಯನ್ನು ಮಾಡಿರುವುದು ಕಂಡುಬರುತ್ತದೆ. ಇವುಗಳ ರಚನೆಗೆ ಸ್ಥಳೀಯವಾಗಿ ದೊರೆಯುವ ಕೆಂಪು ಮರಳು ಮಿಶ್ರಿತ ಕಲ್ಲು, ಸೇದಿಕಲ್ಲುಗಳನ್ನು ಬಳಸಿಕೊಳ್ಳಲಾಗಿದೆ. ಇವುಗಳನ್ನು ಸುಂದರವಾಗಿ, ಅಲಂಕಾರಿಕವಾಗಿ ನಿರ್ಮಾಣ ಮಾಡಿದ್ದಾರೆ.

ಅಂದಿನ ವಾಸ್ತು ವೈಭವವನ್ನು ಶ್ರೀ ಸಿದ್ಧಲಿಂಗೇಶ್ವರ ದೇವಾಲಯದಲ್ಲಿ ಇಂದಿಗೂ ಕಾಣಬಹುದು.

ವಿಷ್ಣುವಿನ ದೇವಾಲಯದಲ್ಲಿ ಪೂಜೆ ಮಾಡುವುದನ್ನು ಕಾಣಬಹುದು. ಈ ಪ್ರದೇಶದಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆ ಇದ್ದರೂ ಸಹ ವೈಷ್ಣವ ದೇವಾಲಯಗಳ ನಿರ್ಮಾಣವು ದ್ವಿತೀಯ ಹಂತದಲ್ಲಿ ಕಂಡು ಬರುತ್ತವೆ.

ಜೈನ ಧರ್ಮವು ತಾಲೂಕಿನಲ್ಲಿ ಪ್ರಚಲಿತದಲ್ಲಿತ್ತು. ಈ ಪಂಥಕ್ಕೆ ಸಂಬಂಧಿಸಿದ ದೇವಾಲಯಗಳ ಸಂಖ್ಯೆ ತೀರಾ ವಿರಳವಾಗಿ ನಿರ್ಮಾಣವಾದರೂ ಅವು ನಾಶವಾಗಿವೆ. ಗೋಗಿಯ ಪಾರ್ಶ್ವನಾಥ ಜಿನಾಲಯವು ಸುಂದರವಾಗಿದ್ದು ಹಲವು ಭಾರಿ ಜೀರ್ಣೋದ್ಧಾರಗೊಂಡಿದೆ.

ಐದನೇ ಅಧ್ಯಾಯದಲ್ಲಿ ಈ ಪ್ರದೇಶದಲ್ಲಿ ದೊರೆತ ಮೂರ್ತಿಶಿಲ್ಪಗಳು ಬಗ್ಗೆ ಅಭ್ಯಸಿಸಲಾಗಿದೆ. ಶಿವನ ಪ್ರತೀಕವಾಗಿ ಶಿವಲಿಂಗವನ್ನು ಶೈವರು ಪೂಜಿಸುತ್ತಿದ್ದರು. ಸಿರವಾಳದ ಸುಜ್ಞಾನೇಶ್ವರ ಮಠದ ಮುಂದೆ ಸುಮಾರು ೨೦ಕ್ಕೂ ಹೆಚ್ಚು ಶಿವಲಿಂಗಗಳಿವೆ. ಇಲ್ಲಿನ ಜನತೆ ಶಿವನ ಆರಾಧಕರಾಗಿದ್ದರು. ಆದ ಕಾರಣ ಈ ಪ್ರದೇಶದಲ್ಲಿ ಶಿವಲಿಂಗಕ್ಕೆ ಹೆಚ್ಚಿನ ಮಹತ್ವವಿರುವುದು ಕಂಡುಬರುತ್ತದೆ. ತಾಲೂಕಿನಲ್ಲಿ ಜೈನ ತೀರ್ಥಂಕರರ ಶಿಲ್ಪಗಳು ಲಭ್ಯವಿರುವುದರಿಂದ ಜೈನಧರ್ಮವು ಉತ್ತಮ ಸ್ಥಿತಿಯಲಿತ್ತು ಎಂದು ಹೇಳಬಹುದಾಗಿದೆ.

ನಗರದಲ್ಲಿ ರಾಷ್ಟ್ರಕೂಟರ ಕಾಲದ ಚಾಮುಂಡಿ ವಿಗ್ರಹ ದೊರೆತಿರುವುದರಿಂದ ಈ ಪ್ರದೇಶದಲ್ಲಿ ಶಾಕ್ತ ಪಂಥವು ಜಾರಿಯಲಿದುದ್ದು ಕಂಡುಬರುತ್ತದೆ. ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನ ಕೈಗೊಳ್ಳಬೇಕಾಗಿದೆ.

ಈ ಪ್ರದೇಶದಲ್ಲಿ ಪ್ರತ್ಯೇಕವಾಗಿ ಮೂರ್ತಿಶಿಲ್ಪಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಅದರ ಬದಲಿಗೆ ದೇವಾಲಯಗಳ ಭಿತ್ತಿಗಳಲ್ಲಿ, ನವರಂಗಗಳ ಸ್ತಂಭಗಳಲ್ಲಿ, ಮನೋಜ್ಞವಾಗಿ ಕಥಾನಿರೂಪಕ ಶಿಲ್ಪಗಳನ್ನು (ಪಂಚತಂತ್ರ, ಮಹಾಭಾರತ, ರಾಮಾಯಣ, ಭಗವದ್ಗೀತೆಯ ದೃಶಾವಳಿಗಳನ್ನು ಚಿತ್ರಿಸಿದ್ದಾರೆ). ಇವುಗಳ ಜೊತೆಗೆ ಸಾರ್ವಜನಿಕ ಬಾವಿಗಳಲ್ಲಿ ಸಮುದ್ರ ಮಂಥನ, ಗಜಲಕ್ಷ್ಮಿ, ಕಿರಾತಾರ್ಜುನರ ಯುದ್ಧ, ರಾಮ ರಾವಣರ ಯುದ್ಧ, ವಾಲಿ ಸುಗ್ರಿವರ ಯುದ್ಧ, ವಿಷ್ಣುವಿನ ಅವತಾರ, ಪ್ರಾಣಿಗಳ ಚಿತ್ರ, ಪಂಚತಂತ್ರದ ನೀತಿ ಕಥೆಗಳನ್ನು ಶಿಲ್ಪಕಲೆಯಲ್ಲಿ ಆಕರ್ಷಕವಾಗಿ ಸಾರ್ವಜನಿಕರಿಗೆ ಮನ ಮುಟ್ಟುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಸಿರವಾಳದ ಸುಜ್ಞಾನೇಶ್ವರ ಬಾವಿ ಇದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದೆ.

**'ಇತಿಹಾಸವನ್ನು ಅರಿಯದವರು ಇತಿಹಾಸವನ್ನು ನಿರ್ಮಿಸಲಾರರು'** ಎನ್ನುವ ಮಾತಿನಂತೆ ಮುಂದಿನ ಪೀಳಿಗೆಗೆ ಇತಿಹಾಸದ ಮೆರಗನ್ನು ತಲುಪಿಸುವ ದೃಷ್ಟಿಯಿಂದ

ನಾವು ಈ ಐತಿಹಾಸಿಕ ಸಂಶೋಧನೆ ಕೈಗೊಂಡಿದ್ದೆವೆ. ಶಾಸನಗಳು ಮತ್ತು ವಾಸ್ತುಶಿಲ್ಪಗಳ ಬಗ್ಗೆ ತಿಳುವಳಿಕೆ ಸೂಕ್ತವಾದ ರಕ್ಷಣೆ ನೀಡಬೇಕಾಗಿರುವುದು ಪ್ರಸ್ತುತ ಪರಿಸ್ಥಿತಿಯಲ್ಲಿ ಅತ್ಯವಶ್ಯಕವಾಗಿದೆ. ಸ್ಥಳೀಯವಾಗಿ ದೊರೆತ ಸಂಪನ್ಮೂಲಗಳನ್ನು ಬಳಸಿ ಶಾಸನಗಳು ಹಾಗೂ ದೇವಾಲಯಗಳನ್ನು ರಕ್ಷಿಸಿ ಮುಂದಿನ ಜನಾಂಗಕ್ಕೆ ಒಪ್ಪಿಸಬೇಕಾದ ನೈತಿಕ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ಆ ನಿಟ್ಟಿನಲ್ಲಿ ನಾವು ಹೆಜ್ಜೆಗಳನ್ನು ಇಡದಿದ್ದರೆ ಆ ಶಾಸನಗಳು ಮತ್ತು ದೇವಾಲಯಗಳು ವಿಶ್ವವಿದ್ಯಾಲಯಗಳ ಪ್ರಬಂಧಗಳಲ್ಲಿ, ಛಾಯಾಚಿತ್ರಗಳಲ್ಲಿ ಮಾತ್ರ ಕಾಣಬಹುದಾದ ದಿನಗಳು ಬರುತ್ತವೆ !


ಮದ್ರಿಕಿ
ಅಣಬಿ
ಗೋಗಿ
ಸಿರವಾಳ
ಭೀ ಗುಡಿ
ಶಹಾಪುರ
ದೋರನಹಳ್ಳಿ
ರಸ್ತಾಪುರ
ಸಗರ
ಶಹಾಪುರ ತಾಲೂಕು

ಅವಿಭಜಿತ ಗುಲಬರ್ಗಾ ಜಿಲ್ಲೆ




ಯಾದಗಿರಿ
ಶಹಾಪುರ
ಶೋರಾಪುರ
ನೂತನ ಯಾದಗಿರಿ ಜಿಲ್ಲೆ



ದೇಗುಲಗಳ ಸಮೂಹ, ಅಣಬಿ



ರಾಷ್ಟ್ರಕೂಟ ದೇಗುಲ, ಸಿರವಾಳ



ನನ್ನಯ್ಯ ದೇವಾಲಯ ಪಶ್ಚಿಮ ದ್ವಾರ, ಸಿರವಾಳ



ಸಭಾ ಮಂಟಪ ಸಿದ್ಧಲಿಂಗೇಶ್ವರ ದೇವಾಲಯ, ಸಿರವಾಳ



ದಿಗ್ಗಿ ಅಗಸಿ (ಪಶ್ಚಿಮ ದ್ವಾರ), ಶಹಾಪುರ



ಬಡಾ ದರ್ವಾಜ್ (ಕೋಟೆ ಪ್ರವೇಶ ದ್ವಾರ), ಸಗರ



ಬಾರಾಬರಿ ವಾಸ್ತುಶಿಲ್ಪ, ಗೋಗಿ



ಚಂದಾ ಹುಸ್ಸೈನಿ ಮಡದಿ ಮತ್ತು ಮಗನ ಗೋರಿಯ
ಗುಮ್ಮಟ, ಗೋಗಿ



ಪರ್ಶಿಯನ್ ಶಾಸನ ದಿಡ್ಡಿ ಅಗಸಿ, ಶಹಾಪುರ



ಬಡಾ ದರ್ವಾಜ್ ಮೇಲಿನ ಪರ್ಶಿಯನ್ ಶಾಸನ, ಸಗರ



ಭೀಮರಾಯನಗುಡಿ ಶಾಸನ, ಭೀಮರಾಯನಗುಡಿ



ಚಂದ್ರನಾಥ ವಿಗ್ರಹದ ಕೆಳಭಾಗದ ಜೈನ ಶಾಸನ,
ಗೋಗಿ



ಸಪ್ತ ಮಾತೃಕೆ ಶಿಲ್ಪ, ಮದ್ರಿಕಿ



ವೀರಗಲ್ಲು , ಹುಲ್ಕಲ್.(ಕೆ)



ಗಜಲಕ್ಷ್ಮಿ ಶಿಲ್ಪ, ಸಿರವಾಳ



ಸುಜ್ಞಾನಿ ಬಾವಿ ಶಿಲ್ಪ, ಸಿರವಾಳ



ಬೆಟ್ಟದ ಮೇಲೆ ಮಲಗಿರುವ ಬುದ್ಧ, ಶಹಾಪುರ



ಕೋಟೆ, ಶಹಾಪುರ



ತೀರ್ಥಂಕರ ವಿಗ್ರಹ ಸಿದ್ಧಲಿಂಗೇಶ್ವರ
ದೇವಾಲಯ, ಸಿರವಾಳ



ವಿಷ್ಣು ವಿಗ್ರಹ, ಮದ್ರಿಕಿ



ಸ್ಥಂಭಶಿಲ್ಪ ಶಾಸನ, ಅಣಜಿ



ವೀರಗಲ್ಲು, ಸಿರವಾಳ

# ಆಕರ ಗ್ರಂಥಗಳು

೧. ಅಕ್ಕಿ.ಡಿ.ಎನ್, ೧೯೯೬, 'ಸಗರನಾಡ ಸಿರಿ', ಕವಿಕುಂಚ ಪ್ರಕಾಶನ, ಗೋಗಿ.

೨. ಅಪರ್ಣ.ಕೂ.ಸ, ೨೦೦೨, 'ದೇವಾಲಯ ವಾಸ್ತುಶಿಲ್ಪ ಪರಿಚಯ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಗೋಪಾಲ್‌ರಾವ್. ಎಚ್.ಎಸ್, ೧೯೯೩, 'ಕಲ್ಯಾಣ ಚಾಲುಕ್ಯರ ದೇವಾಲಯಗಳ : ಒಂದು ಸಾಂಸ್ಕೃತಿಕ ಅಧ್ಯಯನ ', ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು.

೪. ಗೋಪಾಲ್‌ರಾವ್.ಎಚ್.ಎಸ್ (ಸಂ), ೨೦೦೮, 'ರಾಷ್ಟ್ರಕೂಟ ಶಿಲ್ಪಕಲೆ ', ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

೫. ಚನ್ನಬಸಪ್ಪ.ಎಸ್.ಪಾಟೀಲ್, ೧೯೯೯, 'ಕರ್ನಾಟಕ ಕೋಟೆಗಳು' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಚಿದಾನಂದ ಮೂರ್ತಿ.ಎಂ, ೨೦೦೨, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ', ಸಪ್ನ ಬುಕ್ ಹೌಸ್, ಬೆಂಗಳೂರು.

೭. ನಿಂಗಣ್ಣ.ಚಿ.ಸಿ, ೨೦೦೮, 'ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ', ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೮. ಪರಮಶಿವಮೂರ್ತಿ.ಡಿ.ವಿ, ೧೯೯೯, 'ಕನ್ನಡ ಶಾಸನ ಶಿಲ್ಪ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಪಾಟೀಲ್.ಎಂ.ಬಿ.(ಸಂ), ೧೯೯೭, 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್', ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಬೆಂಗಳೂರು.

೧೦. ಯಾಸೀನ್ ಖುದ್ದೂಸಿ.ಎಂ. ಸೀತಾರಾಮ ಜಾಗಿರದಾರ್(ಸಂ), ೨೦೦೧, 'ಕರ್ನಾಟಕದ ಪರ್ಶಿಯನ್ ಅರೇಬಿಕ್ ಮತ್ತು ಉರ್ದು ಶಾಸನಗಳು', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ರಂಗರಾಜ ವನದುರ್ಗ, ೧೯೯೬, 'ಶಹಾಪುರ ತಾಲೂಕಿನ ಶಾಸನಗಳು : ಒಂದು ಸಮೀಕ್ಷೆ ', ಸಗರನಾಡು ಅಧ್ಯಯನ ಸಂಸ್ಥೆ, ಶಹಾಪುರ.

೧೨. ರಮೇಶ ನಾಯಕ (ಸಂ), ೨೦೦೭, 'ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ

ಅಧ್ಯಯನಗಳ ಮರುಚಿಂತನೆ ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ವಾಸುದೇವ ಬಡಿಗೇರ, ೨೦೦೬, 'ಕರ್ನಾಟಕ ದೇವಾಲಯ ಕೋಶ : ಬಿಜಾಪುರ ಜಿಲ್ಲೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ಶಿವಾನಂದ.ವಿ.(ಸಂ), ೧೯೯೨, 'ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು', ಕನ್ನಡ ಪೀಠ, ಬನಾರಸ್ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ.

೧೫. ಶೇಷಶಾಸ್ತ್ರಿ.ಆರ್, ೨೦೦೪, 'ಕರ್ನಾಟಕದ ವೀರಗಲ್ಲುಗಳು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೬. ಸೂಗಯ್ಯ ಹಿರೇಮಠ (ಸಂ), ೧೯೯೪, 'ಶಹಾಪುರ ದರ್ಶನ', ದರ್ಶನ ಪ್ರಕಾಶನ, ಶಹಾಪುರ.

೧೭. ಹನುಮಾಕ್ಷಿ ಗೋಗಿ(ಸಂ), ೧೯೯೬, 'ಕಲಬುರ್ಗಿ ಜಿಲ್ಲೆಯ ಶಾಸನಗಳು', ಶಿವಚಂದ್ರ ಪ್ರಕಾಶನ, ನವನಗರ, ಹುಬ್ಬಳ್ಳಿ.

೧೮. ಹನುಮಾಕ್ಷಿ ಗೋಗಿ, ೨೦೦೫, 'ಸಂಶೋಧನ ಲೇಖನಗಳು', ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

**ಅಪ್ರಕಟಿತ ಆಕರ ಗ್ರಂಥಗಳು**

೧೯. ಪ್ರಹ್ಲಾದ್ ರೆಡ್ಡಿ.ಬಿ., ೧೯೯೯, 'ಹೈದ್ರಾಬಾದ್ ಕರ್ನಾಟಕದ ಜೈನ ಕೇಂದ್ರಗಳು' ಪಿಎಚ್.ಡಿ. ಮಹಾಪ್ರಬಂಧ (ಅಪ್ರಕಟಿತ), ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೦. ಮೋನಪ್ಪ ಸಾಯಬಣ್ಣ, ೨೦೦೮, 'ಕಲ್ಬುರ್ಗಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪಿಎಚ್.ಡಿ. ಮಹಾಪ್ರಬಂಧ(ಅಪ್ರಕಟಿತ), ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

**ಇಂಗ್ಲೀಷ್ ಗ್ರಂಥ**

೨೧. Channabasappa.s.patil and balasubramanya, 2001, 'SIRIVAL', archaeology and museums, mysore.

## ಸಂದರ್ಶನ ಮಾಡಿದ ವ್ಯಕ್ತಿಗಳು ಮತ್ತು ಸ್ಥಳ

**೧) ಶ್ರೀ ಡಿ.ಎನ್.ಅಕ್ಕಿ.**

ಚಿತ್ರಕಲಾ ಶಿಕ್ಷಕರು ಮತ್ತು ಇತಿಹಾಸ ತಜ್ಞರು

ಗೋಗಿ ೫೮೫೩೦೯

**೨) ಶ್ರೀ ಬಾಸ್ಕರರಾವ್ ಮೂಡಬೂಳ.**

ಖ್ಯಾತ ವಕೀಲರು ಮತ್ತು ಇತಿಹಾಸ ತಜ್ಞರು.

'ಕೃಷಿ ನಿವಾಸ' ಶಹಾಪುರ.

**೩) ನಗರ ಕೇಂದ್ರ ಗ್ರಂಥಾಲಯ (ಕರ್ನಾಟಕ ರಾಜ್ಯ ಪತ್ರ).**

ಸುಪರ್ ಮಾರ್ಕೆಟ್ ಗುಲಬರ್ಗಾ.

# ಸಂದರ್ಭ ಸೂಚಿ

೧. ಗುಲ್ಬರ್ಗಾ ಜೀಲ್ಲಾ ಗ್ಯಾಸೆಟಿಯರ್ – ಗು.ಜಿ.ಗ್ಯಾ

೨. ಕಲಬುರ್ಗಿ ಜೀಲ್ಲೆಯ ಶಾಸನಗಳು – ಕ.ಜಿ.ಶಾ

೩. ೧೯೯೧ರ ಜನಗಣತಿ ಆಧಾರ – ೧.ಜ.ಆ

೪. ಶಹಾಪುರ ತಾಲೂಕಿನ ಶಾಸನಗಳು – ಶ.ತಾ.ಶಾ

೫. ಸಗರನಾಡ ಸಿರಿ – ಸ.ಸಿ

೬. ಹೈದ್ರಾಬಾದ ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು – ಹೈ.ಕ.ಭಾ.ಕ.ಶಿ.ಶಾ

೭.ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ – ಕ.ಪ್ರಾ.ಇ.ಮ.ಪು.ಅ.ಮ.

